→ ಕರ್ನಾಟಕೋ ವಿಜಯತೇ ←

ಶ್ರೀ ಸರಸ್ವತೀ ಭಾರತ ಭಕ್ತ ಗ್ರಂಥಮಾಲೆ

( ತೃತೀಯ ಕುಸುಮ. )

# ಮಹಾತ್ಮಾ ಗಾಂಧಿಯವರ

# ಚರಿತ್ರೆ.

ವೆಂಕಟೇಶ ಲಕ್ಷ್ಮೀನರಸಿಂಹ [illegible]ರ

( ಶ್ರೀ ರಾಮೋಪಾಸಕ

ಪ್ರಕಾಶಕಃ

ಶ್ರೀ. ಕೃಷ್ಣಾಜಿ ಗುರುರಾವ ಸಂಗಮ

ಕಾರ್ಯದರ್ಶಿ,

ಸರಸ್ವತೀ ಧರ್ಮಾರ್ಥ ವಿದ್ಯಾ ಪ್ರಸಾರಕ ವಾಚನಾಲಯ, ಹುಬ್ಬಳ್ಳಿ.

ಒಂದನೇ ಆವೃತ್ತಿ ೧೦೦೦ ಪ್ರತಿಗಳು.



ತಾ: ೧-೫-೧೯೨೨. ಬೆಲೆ ೦-೪-೦

॥ ಶ್ರೀ ರಾಮಚಂದ್ರಪರಬ್ರಹ್ಮಣೇನಮಃ ॥

## ಮಹಾ ಕರ್ಮಯೋಗಿ

# ಮಹಾತ್ಮಾ ಗಾಂಧಿಯವರ ಚರಿತ್ರೆ.

## ಪಂಚದೇವತಾ ಪ್ರಾರ್ಥನೆ.



ವಂದಿಪೆನು **ಶ್ರೀರಾಮಚಂದ್ರನೆ** ।
ತಂದೆತಾಯ್ಗಳುನೀನೆಯೆನ್ನಯ ।
ಬಂಧುರವರಬಂಧುಬಳಗವುನೀನೆಯೆಂದೆನುತ ॥
ಕಂದನೆನ್ನತಿಳಿಯುತೆನ್ನಯ ।
ಕುಂದುಗಳೆಯುತೆ **ಗಾಂಧಿಮಹಿಮರ**।
ಚಂದಚರಿತೆಯಪೇಳಲೆನಗುರೆ **ನೀಡುಸನ್ಮತಿಯ** ॥೧॥

ದೇವಗಂಗಾಧರನೆ **ಸಾಂಬನೆ** ।
ಸೇವಕಪ್ರಿಯಸೋಮಶೇಖರ ।
ಪಾವಕಾಕ್ಷಕ ಪಾಪಹಾರಕ ಪಾರ್ವತೀಪತಿಯೇ ॥
ಭಾವಜಾರಿಯೆ ಭಜಿಪೆಸಂತತ ।

ಪಾವನಾತ್ಮರ **ಗಾಂಧಿಮಹಿಮರ** ||
ಕಾವಚರಿತೆಯಪೇಳಲೆನಗುರೆ **ನೀಡುಸನ್ಮತಿಯ** ||೨||

ಮಾರಮಣ ಪ್ರಭುವರನೆ **ವಿಷ್ಣುವೆ** ।
ಭೂರಮಣ ಭಯನಾಶ ಬಹುವಿಧ ।
ಘೋರ ಪಾಪವಬೇಗಕಳೆವನೆ ಕರುಣಸಾಗರನೇ ||
ಸಾರಸಾಕ್ಷನೆ ಸಾರಿಸ್ತುತಿಪೆನು ।
ಧೀರಮಣಿವರ **ಗಾಂಧಿಮಹಿಮರ** ।
ಚಾರುಚರಿತೆಯಪೇಳಲೆನಗುರೆ **ನೀಡುಸನ್ಮತಿಯ** ||೩||

ತರುಣಿಸುರಮಣಿ **ಶಾರದಾಂಬೆಯೆ** ।
ಕರದಿವೀಣಾಧಾರಿಸದಯಳೆ ।
ಮೆರೆವನೂಪರ ಗೆಜ್ಜೆಕಂಕಣಧರಿಸಿಶೋಭಿಪಳೇ ||
ಪರಮಮಂಗಳೆ ಪದಕೆನಮಿಪೆನು ।
ಚರಣದಾಸನು **ಗಾಂಧಿಮಹಿಮರ** ।
ವರಸುಚರಿತೆಯಪೇಳಲೆನಗುರೆ **ನೀಡುಸನ್ಮತಿಯ** ||೪||

ರಂಜಿಸುವಗಜಮುಖನೆ **ಗಣಪನೆ** ।
ಭಂಜಕನೆ ಭವಸಂಕಟಂಗಳ ।
ಮಂಜುಳಾಂಗನೆ ಮಾಯರಹಿತನೆಮೋದದಾಯಕನೇ||
ನಂಜುಗೊರಲನ ಸುತನೆತವಪದ ।

ಕಂಜಕೆರಗುವೆ **ಗಾಂಧಿಮಹಿಮರ** ।
ರಂಜಿಸುವಚರಿತೆಯನುಪೇಳಲು**ನೀಡುಸನ್ಮತಿಯ** ॥೫॥



## ಸತ್ಕವಿ ಪ್ರಾರ್ಥನೆ.

ಲಲಿತವಹಕರ್ನಾಟನುಡಿಯಿಂ ।
ಫಲಿತವಾದೀಪದ್ಯವೃಕ್ಷದ ।
ಫಲವುತಾನಿದುಸಿಹಿಯೊ ಮೇಣಿದುಕಹಿಯೊನಾಕಾಣೆ ॥
ಒಲುಮೆಯಿಂದಲಿಗೈದಕೃತಿಯೊಳು ।
ನೆಲೆಯುಗೊಂಡಿಹ ಸಕಲದೋಷವ ।
ಸಲಿಲಕ್ಷೀರನ್ಯಾಯದಿಂದಲಿಮನ್ನಿಪುದು **ಬುಧರೇ** ॥೧॥



**ಶ್ರೀಚರಕದೇವತಾಭ್ಯೋನ್ನಮಃ**



❀ ಶ್ರೀ ❀

# ಮಹಾತ್ಮಾ ಗಾಂಧಿಯವರ



# ಚರಿತ್ರೆ.



## ೧ನೇ ಭಾಗ

### ಪ್ರಸ್ತಾವನಾ ಪೀಠಿಕೆ.



ಈ ಮಹೀತಲದಲ್ಲಿ **ಮ. ಗಾಂಧಿ**ಯವರ ಮಹಿಮೆಯನ್ನರಿಯದ ಮಾನವನು ಒಬ್ಬನೂ ಇಲ್ಲವೆಂದು ಹೇಳಿದರೆ ಅತಿಶಯೋಕ್ತಿಯಾಗಲಾರದು. ಆದರಲ್ಲಿ ಭಾರತೀಯರಾದ ನಮ್ಮಗಂತೂ, **ಈ ಮಹಾತ್ಮರು** ರಾಷ್ಟ್ರ ದೇವತಾ ಸ್ವರೂಪರಂತೆ, ಕಾಣುತ್ತಿರುವರು. ಒಬ್ಬ ಸಾಧಾರಣ ವೃದ್ಧಮನುಷ್ಯನನ್ನು ಈಗ ನಡೆಯುತ್ತಿರುವ ರಾಜಕೀಯ ಚಳವಳಿಗೆ **ಸೂತ್ರಧಾರ**ರಾರೆಂದು ಕೇಳಿದರೆ, **ಗಾಂಧೀಮಹಾರಾಜ**ರೆಂದು ಒಮ್ಮೆಲೇ ಉತ್ತರಕೊಡುವನು. ಮತ್ತು ಓಣಿಯಲ್ಲಿ ಆಡುತ್ತಿರುವ **ಖಾದೀಟೊಪ್ಪಿಗೆ**ಯನ್ನು ಹಾಕಿದ ಒಬ್ಬ ಐದು ವರ್ಷದ ಸಣ್ಣ ಹುಡುಗನನ್ನು ನಿನ್ನ ತಲೆಯಮೇಲಿರುವ ಟೊಪ್ಪಿಗೆ ಎಂಥದು, ಎಂದು ಕೇಳಿದರೆ **ಗಾಂಧೀಟೊಪ್ಪಿಗೆ** ಎಂದು ಸಹಜವಾಗಿ ಹೇಳಿಬಿಡುವನು. ಹೀಗೆ ಆ ಬಾಲ ವೃದ್ಧರ ಆದರಕ್ಕೂ

ಪರಿಚಯಕ್ಕೂ ಪಾತ್ರರಾದ ಮಹರ್ನಿಯರ ಮಹಿಮೆಯನ್ನು ಎಷ್ಟೆಂತ ಬಣ್ಣಿಸಲಿ.

ಈ ಪೃಥ್ವಿಯಮೇಲೆ ಮೂರುಮಂದಿ ಶ್ರೇಷ್ಠ ಪುರುಷರಿರುವರು. ಅವರಲ್ಲಿ ನಮ್ಮ **ಮಹಾತ್ಮಾ** ಜಿಯವರೇ ಶ್ರೇಷ್ಠತಮರೆಂರು ಪಾಶ್ಚಿಮಾತ್ಯ ಪಂಡಿತ ಎರ್ಯರ ಉದ್ಗಾರಗಳಿರುವವು. ಅಂದಮೇಲೆ ಈ ಮಹಾನುಹಿಮರ ಕೀರ್ತಿಯು ದಿಗಂತವನ್ನು ವ್ಯಾಪಿಸಿ ನಭೋಮಂಡಲವನ್ನು ಭೇದಿಸಿ ಹೋಗಿರುವದು.

ಈ **ಮಹಾತ್ಮರು** ಆಫ್ರಿಕಾ ಖಂಡವಲ್ಲಿ ನಮ್ಮಹಿಂದೂ ಬಾಂಧವರ ದುಃಖವಿಮೋಚನೆಗಾಗಿ ತಾವು ಪರಿಪರಿಕಷ್ಟಗಳನ್ನು ಸೋಸುತ್ತಿದ್ದಾಗಲೇ ಇವರ ನೈತಿಕ ಬಲವೂ, ಸತ್ಯನಿಷ್ಠೆಯೂ, ನಿಸ್ಪೃಹತೆಯೂ, ಶ್ರಮಸಹಿಷ್ಣುತೆಯೂ ಜಗತ್ತಿಗೆಲ್ಲ ಗೊತ್ತಾದವು, ಈಗಂತೂ ಈ **ಮಹಾತ್ಮರು** ತಮ್ಮ ತಪೋಪ್ರಭಾವದಿಂದ ಸಾಕ್ಷಾತ್ ಕರ್ಮಯೋಗಿಯಂತೆ ಕಾಣುವರು. ಇಂಥ ಮಹಾನುಭಾವರ ಮಹಿಮೆಯನ್ನು ವರ್ಣಿಸುವದು ನನ್ನಂಥ ಅಲ್ಪಜ್ಞನಿಂದ ಅಸಾಧ್ಯ ಕಂಡಿರಾ.

ಈ ಕಾಲಮಾನಕ್ಕೆ ತಕ್ಕಂತೆ ನಮ್ಮೀಭರತ ಖಂಡದ ದಾಸ್ಯ ವಿಮೋಚನೆಗೆ ಮಹಾತ್ಮರಂಥ ವ್ಯಕ್ತಿಗಳು ಅಗತ್ಯವಿದ್ದು ಅವರನ್ನು ದೇವರೇ ಕಳಿಸಿ ಕೊಡುತ್ತಾನೆಂದು ಹೇಳಿದರೆ ತಪ್ಪಾಗಲಾರದು. ಇಂಥ ಈಶ್ವರೀ ವಿಭೂತಿಗಳ ಮಾರ್ಗ ದರ್ಶಕವೂ, ಅನುಕರಣೀಯವೂ, ದೇಶಕಾರ್ಯಕ್ಕೆ ಮಂಗಲದಾಯಕವೂ ಆದ ಅತ್ಯಂತ ಪವಿತ್ರ ಚರಿತ್ರೆಯು ನಮ್ಮ ದೇಶಬಾಂಧವ

ರಿಗೆ ಗೊತ್ತಿರುವದು ಅತಿ ಅವಶ್ಯವಾಗಿರುವದರಿಂದ ಅದನ್ನು ಸಂಕ್ಷಿಪ್ತವಾಗಿ ಯಥಾಮತಿ ತಿಳಿಸಲು ಉಪಕ್ರಮಿಸುತ್ತೇನೆ.

---

# ಜನ್ಮ, ಬಾಲ್ಯ ಹಾಗು ಶಿಕ್ಷಣ.

## ಸನ್ ೧೮೬೯-೧೮೯೨ರ ವರೆಗೆ-

ನಮ್ಮ ಮುಂಬೈ ಇಲಾಖೆಯ ಉತ್ತರ ಭಾಗದಲ್ಲಿ ಕಾಠೆವಾಡ ಪ್ರಾಂತವಿರುವದಷ್ಟೇ? ಅಲ್ಲಿ ಪೋರ ಎಂಬುವದೊಂದು ಸಣ್ಣ ಸಂಸ್ಥಾನವುಂಟು ಪೋರ ಪಟ್ಟಣವೇ ಅದರ ರಾಜಧಾನಿಯು. ಆ ಊರಲ್ಲಿ ಈಗ್ಗೆ ಕೆಲವು ವರ್ಷಗಳಹಿಂದೆ ಕರಮಚಂದಜೀ ಎಂಬ ವಾಣಿಜ್ಯಕುಲದ ಸಭ್ಯಗೃಹಸ್ಥರಿದ್ದರು. ಅವರು ಆ ಸಂಸ್ಥಾನದ ದಿವಾಣರಾಗಿದ್ದರು. ಇವರು ಒಳ್ಳೇ ರಾಜಕಾರಣ ಪಟುಗಳೂ, ಪ್ರಜಾಪಕ್ಷಪಾತಿಗಳೂ. ಧರ್ಮನಿಷ್ಠರೂ ಆಗಿದ್ದರು. ಇವರ ಪತ್ನಿಯವರಾದರೂ ಆ ಪ್ರಾಂತದ ಪ್ರಸಿದ್ಧ ಮನೆತನದ ಹೆಣ್ಣುಮಕ್ಕಳು ಇವರ ಪುಣ್ಯೋದರದಲ್ಲಿ ನಮ್ಮ ಚರಿತ್ರನಾಯಕರಾದ **ಮೋಹನದಾಸರು** ಸನ್ ೧೮೬೯ ನೇ ಇಸ್ವಿ ಅಕ್ಟೋಬರ ತಿಂಗಳ ೨ ನೇ ತಾರೀಖಿನ ದಿವಸ ಶುಭ ಮುಹೂರ್ತದಲ್ಲಿ **ಉದಯಿಸಿದರು.** ಇವರು ತಮ್ಮ ಹೆಸರಿಗೆ ತಕ್ಕಂತೆ ಬಹು ಚಲುವರು ಅಲ್ಲದೆ ತಮ್ಮ ಮೋಹಕ ಗುಣದಿಂದ ಜಗತ್ತನ್ನೇ ಮೋಹಗೊಳಿಸುತ್ತಿದ್ದರು **ಮಹಾತ್ಮರ** ಮಾತೆಯವರು ಒಳ್ಳೇ ಧರ್ಮನಿಷ್ಠರೂ, ಪತಿಸೇವಾಪಾರಾಯಣರೂ ಆಗಿದ್ದರು. ಇವರು ದೊಡ್ಡ ಶ್ರೀಮಂ

ಸ್ಥಿತ್ಯಂತರಕ್ಕೆ ಕಾರಣವಾಯಿತೆಂದು ಹೇಳಬಹುದು. ಆದರೆ ಈ ಪರಿಸ್ಥಿಯು ಕಡೆತನಕ ಉಳಿಯಲಿಲ್ಲವೆಂಬುದು ಅವರ ಮುಂದಿನ ಇತಿಹಾಸದ ಮೇಲಿಂದ ತಿಳಿಯುವದು.

## ವಿಲಾಯತಿಯ ಪ್ರೌಢ ವಿದ್ಯಾಭ್ಯಾಸ.

ಮಹಾತ್ಮರು ಮೆಟ್ರಿಕ್ ಪರೀಕ್ಷೆಯಲ್ಲಿ ಪಾಸಾದಕೂಡಲೇ ಇವರ ಆಪ್ತರಲ್ಲೊಬ್ಬರು ಇವರನ್ನು ಬ್ಯಾರಿಸ್ಟರ ಅಭ್ಯಾಸಕ್ಕಾಗಿ ವಿಲಾಯತಿಗೆ ಕಳಿಸಬೇಕೆಂದು ಆಲೋಚಿಸಿದರು. ಮಹಾತ್ಮರಿಗಾದರೂ ವಿಲಾಯತಿಗೆ ಹೋಗಿ ಆ ದೊಡ್ಡ ಪರೀಕ್ಷೆಯಲ್ಲಿ ಪಾಸಾಗಿ ಬರುವ ಉಮೇದು ಬಹಳವಾಗಿ ಇತ್ತು. ಎಲ್ಲಾ ನಿಜ. ಆದರೆ ಅವರ ಆ ವಿಚಾರವು ಅವರ ಮಾತೃಶ್ರೀಯವರ ಮನಸ್ಸಿಗೆ ಬರಲಿಲ್ಲ. ಯಾಕಂದರೆ ವಿಲಾಯತಿಗೆ ಹೋಗಿ ಬಂದ ಎಷ್ಟೋ ವಿದ್ಯಾರ್ಥಿಗಳು ಜಾತಿಭ್ರಷ್ಟರೂ ಅನಾಚಾರಿಗಳೂ ಆಗಿರುವರೆಂದು ಆ ಸಾಧ್ವೀ ಮಣಿಯರು ಕೇಳಿದ್ದರಿಂದ ರಿಂದ ಮೊದಮೊದಲು ತಮ್ಮ ಮಗನ ಪರದೇಶ ಗಮನಕ್ಕೆ ಸಮ್ಮತಿ ಕೊಡಲಿಲ್ಲ. ಆದರೆ ಅವರ ಇಷ್ಟಮಿತ್ರರೆಲ್ಲ ಅವರಿಗೆ ತಿಳಿಸಿ ಹೇಳಿದ್ದರಿಂದ ಕಡೆಗೆ ಒಪ್ಪಿಕೊಂಡರು. ಮತ್ತು ತಮ್ಮ ಮಗನು— “ ಮದ್ಯಪಾನ ಮಾಡುವದಿಲ್ಲ. ಮಾಂಸ ತಿನ್ನುವದಿಲ್ಲ. ಹಾಗು ಪರ ಸ್ತ್ರೀಯರನ್ನು ಕಣ್ಣೆತ್ತಿ ಸಹ ನೋಡುವದಿಲ್ಲ ” ಎಂದು ಗುರುಗಳ ಮುಂದೆ ಪ್ರತಿಜ್ಞಾಪೂರ್ವಕವಾಗಿ ಹೇಳಬೇಕೆಂದು ಹೇಳಿದರು. ಮೋಹನದಾಸರು ಅದಕ್ಕೆ ಒಪ್ಪಿ ಕೊಂಡು ಒಬ್ಬ ಜೈನ ಸನ್ಯಾಸಿಯ ಬಳಿಗೆ ಹೋಗಿ ತಮ್ಮ ಮಾತೆಯ

ಮೂರು ಮಾತುಗಳನ್ನು ಪಾಲಿಸುವ ಬಗ್ಗೆ ಪ್ರಮಾಣ ಮಾಡಿ ಹೇಳಿದರು. ಆಗ ಅವರ ತಾಯಿಯವರು ವಿಲಾಯತಿಗೆ ಹೋಗಿಬರಲಿಕ್ಕೆ ಮಗನಿಗೆ ಆನಂದದಿಂದ ಅಪ್ಪಣೆ ಕೊಟ್ಟರು. ಮತ್ತು ಅವರ ಬಂಧುಗಳು ಧನಸಹಾಯ ಮಾಡಲಿಕ್ಕೆ ವಚನ ಕೊಟ್ಟರು. ಆಗ ಮೋಹನದಾಸರು ನಿಶ್ಚಿಂತೆಯಿಂದ ವಿಲಾಯತಿಗೆ ಪ್ರಯಾಣ ಮಾಡಿದರು.

**ಮಹಾತ್ಮರು** ಸನ್ ೧೮೮೮ನೇ ಇಸ್ವಿಯಲ್ಲಿ ವಿಲಾಯತಿಗೆ ಸುಖರೂಪದಿಂದ ಮುಟ್ಟಿದರು. ಈ ಮೊದಲೇ ವಿದ್ಯಾಭ್ಯಾಸಕ್ಕಾಗಿ ಹೋಗಿದ್ದ ಇವರ ಮಿತ್ರರು ಲಂಡನ್ ಪಟ್ಟಣದಲ್ಲಿರುತ್ತಿದ್ದರು. ಆದರೆ ಅತಿವಿಶಾಲವಾದ ಪಟ್ಟಣದಲ್ಲಿ ತಮ್ಮ ಸ್ನೇಹಿತರನ್ನು ಗೊತ್ತು ಹಚ್ಚುವದು ಮೋಹನದಾಸರ ಕಡೆಯಿಂದ ಆಗಲಿಲ್ಲ. ಆದ್ದರಿಂದ ಉಪಾಯವಿಲ್ಲದೆ ಒಂದು ಖಾನಾವಳಿಯಲ್ಲಿ ಇಳಕೊಳ್ಳಬೇಕಾಯಿತು. ಅಲ್ಲಿ ಕಾಲಿಟ್ಟಕೂಡಲೇ ಅಲ್ಲಿಯ ಆಚಾರವಿಚಾರಗಳನ್ನೂ, ಸ್ಥಿತಿಗತಿಗಳನ್ನೂ ನೋಡಿ ಅವರಿಗೆ ಬಹು ಅಸಹ್ಯವೆನಿಸಿತು. ಊಟ ಉಪಚಾರಕ್ಕೆ ಏನೂ ಸೊಗಸಾಗಲಿಲ್ಲ. ಮೇಲಾಗಿ ತಮ್ಮ ಪರಿಚಯಸ್ಥರು ಯಾರೂ ಇಲ್ಲದ್ದರಿಂದ ಯಾವರೀತಿಯಿಂದಲೂ ಅವರಿಗೆ ಅನುಕೂಲವಾಗಲಿಲ್ಲ. ಹೀಗೆ ಬಹು ತೊಂದರೆಯಿಂದ ಕೆಲವು ದಿವಸ ಕಾಲಕ್ರಮಣ ಮಾಡುತ್ತಿರಲು ಕಾಲಕರ್ಮ ಸಂಯೋಗದಿಂದ ಹಿಂದುಸ್ಥಾನದ ಒಬ್ಬ ತರುಣ ಸ್ನೇಹಿತನ ಭೆಟ್ಟಿಯಾಯಿತು. ಆಗ ಕೇಳುವದೇನದೆ ದುರ್ಭಿಕ್ಷದಲ್ಲಿ ಸುಭಕ್ಷಭೋಜನವಾದಂತಾಗಿ ಅವರಿಗೆ ಬಹು ಸಂತೋಷವೆನಿಸಿತು. ಆ ತರುಣ ಮಿತ್ರನು ವಿಲಾಯ

ತಿಗೆ ಬಂದು ಬಹಳ ದಿವಸಗಳಾಗಿದ್ದವು. ಆದ್ದರಿಂದ ಅಲ್ಲಿಯ ಪದ್ಧತಿಯೆಲ್ಲ ವೈಯುಂಡತಾಗಿ ಅಲ್ಲಿಯ ಆಚರಣೆಯೆಲ್ಲ ಆತನಿಗೆ ಮಾನ್ಯವಾಗಿಹೋಗಿದ್ದವು. ಕಾರಣ ಸಭ್ಯವೃತ್ತಿಯು ಹಾಗೂ ಸಾದಾ ಪೋಷಾಕಿನ ಮೋಹನದಾಸರನ್ನು ನೋಡಿ ಆ ತರುಣನಿಗೆ ಬಹು ವಿನೋದವೆನಿಸಿತು. ಏನು ಸದಾಚಾರ ಸಂಪನ್ನರನ್ನು ನೋಡಿ ವಿನೋದವೇ? ಪಾಪ ಆತನೇನು ಮಾಡಿಯಾನು! ಆ ವಿಧರ್ಮಿಗಳ ಸಹವಾಸವೂ, ಶಿಕ್ಷಣವೂ ಆತನ ಕೋಮಲ ಮನಸ್ಸನ್ನು ಕಡುಕಲುಷಿತ ಮಾಡಿ ಬಿಟ್ಟಿದ್ದವು. ಅಂತಲೇ ನಮ್ಮ ಮೋಹನದಾಸರ ಮಾತೆಯವರು ಅವರನ್ನು ವಿಲಾಯತಿಗೆ ಕಳಿಸಲು ಮೊದಲು ಒಪ್ಪಿದ್ದಿಲ್ಲ. ಇರಲಿ

ಏನೇ ಆಗಲಿ "ಅಷ್ಟಕಂಡಿರಾ ಕೃಷ್ಣಂಭಟ್ಟರೇ" ಎಂಬಂತೆ ಆ ಪರದೇಶದಲ್ಲಿ ಸ್ವದೇಶ ಬಾಂಧವನು ಭೆಟ್ಟಿಯಾದ್ದಕ್ಕಾಗಿ ಮೊಹನದಾಸರಿಗೆ ಸಂತೋಷವೆನಿಸಿತು. ಆತನಾದರೂ ಅವರನ್ನು ಪರಮಾದರದಿಂದ ಸತ್ಕರಿಸಿ, ರಿಚಮಂಡ ಓಣಿಯೊಳಗಿನ ಇನ್ನರಟೆಂಪಲ್, ಎಂಬ ಒಂದು ಭವ್ಯಗೃಹದಲ್ಲಿ ಅವರನ್ನು ಇಳಿಸಿ ಎಲ್ಲತರದ ಅನುಕೂಲ ಮಾಡಿಕೊಟ್ಟನು. ಆತನು ಅಲ್ಲಿಯ ಆಹಾರ ವಿಹಾರಗಳಿಗೆ ಮನಮೆಚ್ಚಿ ಹೋಗಿದ್ದರಿಂದ ಮೋಹನದಾಸರಿಗೆ ತನ್ನಂತೆ ಇರಲಿಕ್ಕೆ ಹೇಳಿದನು. ಅದನ್ನು ಕೇಳಿ ಅವರಿಗೆ ಬಹು ಖೇದವೆನಿಸಿತು. ಆದರೆ ಅವರು ದೃಢ ನಿಶ್ಚಯದಿಂದ ತಮ್ಮ ವ್ರತಭಂಗವಾಗಗೊಡಲಿಲ್ಲ. ಒಮ್ಮೆ ಮೋಹನದಾಸರಿಗೆ ಮೇಜವಾನಿಯಲ್ಲಿ ಔತಣ ಬಂದಿತ್ತು. ಅಲ್ಲಿ ಮಾಂಸಯುಕ್ತವಾದ ಸಾರನ್ನು ಬಡಿಸಲು ಅವರು

ಸಿಟ್ಟಿಗೆದ್ದು ಆ ಅನಾಚಾರಿಗಳೊಡನೆ ಊಟಕ್ಕೆ ಕೂಡ್ರದೆ ಎದ್ದು ಹೊರಟು ಹೋದರು ಮತ್ತು ಆ ದುರುಳರ ಸಂಗತಿ ಯೇಬೇಡವೆಂದು ಅವರೆಲ್ಲರನ್ನು ಬಿಟ್ಟು ಒಂದು ಸಣ್ಣಕೋಣೆ ಯನ್ನು ಬಾಡಿಗೆ ಹಿಡಿದು ಅಲ್ಲಿ ಸ್ವತಃ ಅಡಿಗೆ ಮಾಡಿಕೊಂಡು ಅಭ್ಯಾಸ ಮಾಡಹತ್ತಿದರು. ಪ್ರಿಯ ವಾಚಕರೇ ನೋಡಿದರಾ ಮಹನೀಯರ ಸ್ವಧರ್ಮನಿಷ್ಠೆಯು ಜಾಗ್ರತಾವಸ್ಥೆಯನ್ನು ಈ ಮಹಾಮಹಿಮರು ಸ್ವಧರ್ಮಪಾಲನೆಗಾಗಿ ಸ್ವಮಿತ್ರರನ್ನು ತೊರೆದರೇ ಹೊರ್ತು ತಮ್ಮ ಪ್ರತಿಜ್ಞಾ ಭಂಗವಾಗಗೊಡಲಿಲ್ಲ. ಅಹಾ ಇದಲ್ಲವೇ ಮಹಾತ್ಮರ ಲಕ್ಷಣವು.

ಈ ಮೇರೆಗೆ ಅಭ್ಯಾಸ ಮಾಡುತ್ತ ಲಂಡನ್ನ ಪಟ್ಟಣದಲ್ಲಿ ಮೂರುವರ್ಷವಿದ್ದು ಬ್ಯಾರಿಸ್ಟರ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿ ಮರಳಿ ತಮ್ಮ ಮಾತೃಭೂಮಿಗೆ ಹೊರಟರು. ಇವರು ಹಿಂದುಸ್ಥಾನಕ್ಕೆ ಬರುವ ಮುಂದೆ ಅವರ ಪರಿಚಯಸ್ಥನಾದ ಒಬ್ಬ ಇಂಗ್ಲಿಷ ಗೃಹಸ್ಥನು ನಿಮಗೆ ವಿಲಾಯತಿಯು ವಾಸವು ಸೇರಿತೇ, ಎಂದು ಕೇಳಿದನು. ಆಗ ಅವರು ನಮ್ಮ ಹಿಂದುಸ್ಥಾನವನ್ನು ಬಿಟ್ಟು ಉಳಿದ ದೇಶಗಳೊಡನೆ ಸರಿಹಚ್ಚಿ ನೋಡಿದರೆ ನನಗೆ ಇಂಗ್ಲಂಡ ವಾಸವು ಹೆಚ್ಚು ಸೇರಿತು. ಎಂದು ಒಳ್ಳೇ ಅಭಿಮಾನದಿಂದ ಉತ್ತರಕೊಟ್ಟರು. ಅಹಾ ಇದಲ್ಲವೇ ನಿಜವಾದ ದೇಶಾಭಿಮಾನವು.

**ಮಹಾತ್ಮರ** ಮಾತೋಶ್ರೀಯವರು ತಮ್ಮ ಮಗನು ಬ್ಯಾರಿಸ್ಟರ ಪರೀಕ್ಷೆ ಪಾಸಾಗಿ ಬಂದದ್ದನ್ನಷ್ಟು ನೋಡಲಿಲ್ಲ. ಮೋಹನದಾಸರು ವಿಲಾಯತಿಯಲ್ಲಿರುವಾಗಲೇ ಅವರ

ರಮಾತೆಯವರು ಸ್ವರ್ಗಸ್ಥರಾಗಿದ್ದರು. ಅವರು ತಿರುಗಿ ತಮ್ಮ ಊರಿಗೆ ಬಂದಕೂಡಲೇ ತಮ್ಮ ಪ್ರೀಯಮಾತೆಯ ನಿಧನವಾರ್ತೆಯನ್ನು ಕೇಳಬೇಕಾಯಿತು. ಈ ಹೃದಯದ್ರಾವಕ ವಾರ್ತೆಯಿಂದ ಅವರ ಕೋಮಲ ಮನಸ್ಸಿಗೆ ಬಹು ವ್ಯಥೆಯುಂಟಾಯಿತು. ಈಶಚಿತ್ತಕ್ಕೆ ಉಪಾಯವಿಲ್ಲ. ಕಡೆಗೆ ಅವರು ಮುಂಬಯಿ ಪಟ್ಟಣಕ್ಕೆ ಬಂದು ಬ್ಯಾರಿಷ್ಟರಿಯ ಉದ್ಯೋಗವನ್ನು ಮಾಡಲಾರಂಭಿಸಿದರು.

## ಮಹಾತ್ಮರ ಆಫ್ರಿಕೆಯವಾಸ.

ಪ್ರಿಯವಾಚಕರೇ!

**ಮಹಾತ್ಮರ** ಮನೋಹರ ಹಾಗು ಮಹಿಮಾ ವಿಶೇಷಯುಕ್ತವಾದ ಜೀವನ ಕ್ರಮದಲ್ಲಿ ಆ ಮಹನೀಯರು ಹಿಂದಕ್ಕೆ ದಕ್ಷಿಣ ಆಫ್ರಿಕೆಯಲ್ಲಿಯ ನಮ್ಮ ಹಿಂದೂ ಜನರ ಕಷ್ಟನಿವಾರಣೆಗಾಗಿ ಮಾಡಿದ ಸಾಹಾಸ ಮತ್ತು ಈಗ ಭರತ ಮಾತೆಯ ಬಂಧವಿಮೋಚನಗಾಗಿ ಪಡುತ್ತಿರುವ ಪ್ರಯಾಸ, ಹೀಗೆ ಎರಡು ಭಾಗಗಳನ್ನುಮಾಡಬಹುದು ಅದರಲ್ಲಿ ಮೊದಲನೇ ಭಾಗವನ್ನು ಇಲ್ಲಿ ವಿವರಿಸುತ್ತೇನೆ.

ಮುಂಬಯಿ ಪಟ್ಟಣದಲ್ಲಿ ಬ್ಯಾರಿಷ್ಟರ ಆದ ಒಂದು ವರ್ಷದೊಳಗೆ **ಮ. ಗಾಂಧಿ**ಯವರಿಗೆ ಒಂದು ವ್ಯಾಜ್ಯದ ನಿಮಿತ್ತ ಆಫ್ರಿಕೆಗೆ ಹೋಗುವ ಪ್ರಸಂಗ ಬಂತು. ಆ ವ್ಯಾಜ್ಯವಾದರೂ ಒಂದು ವರ್ಷದವರೆಗೆ ನಡೆಯತಕ್ಕದ್ದಿತ್ತು ಆದ್ದರಿಂದ ಇವರು ಸನ್ ೧೮೯೩ನೇ ಇಸ್ವಿಯಲ್ಲಿ ಹಿಂದುಸ್ಥಾನದಿಂದ ಹೊ

ರಟು ದಕ್ಷಿಣ ಆಫ್ರಿಕದ ದರ್ಬನ ನಗರಕ್ಕೆ ಹೋಗಿ ಮುಟ್ಟಿ ದರು. ಅಲ್ಲಿಗೆ ಹೋದಕೂಡಲೆ ಅಲ್ಲಿಯ ಮರಿಷ್ಠಕೋರ್ಟಿನಲ್ಲಿ ಎಡ್ವೋಕೇಟರಾಗಿ ಕೆಲಸ ಮಾಡಲಿಕ್ಕೆ ಬಹು ಶ್ರಮದಿಂದ ಸನ ದು ಪಡೆದರು. ಬರೇ ಸನದು ಪಡೆಯಲಿಕ್ಕೆ ಇವರಿಗೆ ತೊಂದ ರೆಯಾಯಿತಂತಲ್ಲ. ಮುಂದೆ ಇವರಿಗೆ ತೊಂದರೆಯಮೇಲೆ ತೊಂದರೆಗಳು ಬರಹತ್ತಿದವು.

ಒಮ್ಮೆ **ಮಹಾತ್ಮರು** ಕುದುರೆಯ ಬಂಡಿಯಲ್ಲಿ ಕೂತು ಪ್ರವಾಸಮಾಡುತ್ತಿದ್ದರು. ಆ ಬಂಡಿಯ ಒಳಭಾಗದಲ್ಲಿ ಒಬ್ಬ ಪುಷ್ಟಕಾಯದ ಲಠ್ಠಸಾಹೇಬನು ಕುಳಿತಿದ್ದನು. ಇವರು ಕೋ ಚಮನ್ನನ ಮಗ್ಗಲಿಗೆ ಹೊರಗೆ ಕುಳಿತಿದ್ದರು. ನೋಡಿರಿ ಎಷ್ಟು ವಿಲಕ್ಷಣ ವ್ಯತ್ಯಾಸ ಇಷ್ಟಾದರೂ ಆ ಸಾಹೇಬನಿಗೆ ಸಹನವಾಗದೆ ಮಹಾತ್ಮರಿಗೆ ಕಾಲಿಡುವ ಸ್ಥಳದಲ್ಲಿ ನಿಲ್ಲಲಿಕ್ಕೆ ಹೇಳಿದನು. ಅದನ್ನು ಅವರು ಕೇಳಲಿಲ್ಲ. ಆಗ ಆ ಸಾಹೇ ಬನು ಸಿಟ್ಟಿಗೆದ್ದು ಮೋಹನದಾಸರ ಕಪಾಳಕ್ಕೆ ಕೊಟ್ಟನು. ಅದನ್ನು ಅವರು ಬಹು ಶಾಂತರೀತಿಯಿಂದ ತಡಕೊಂಡರು. ಅಷ್ಟಕ್ಕೇ ಬಿಡದೆ ಆ ಕಲ್ಲೆದೆಯ ಕ್ರೂರಸಾಹೇಬನು ಅವರನ್ನು ಹೊಡೆದು ಬಡೆದು ಗಾಡಿಯಿಂದ ಕೆಳಗೆ ಕೆಡವಿದನು. (ಅಯ್ಯೋ ಎಂಥ ನೀಚನವನು) ಇಷ್ಟಾದರೂ ಗಾಡಿಯಲ್ಲಿ ಕೂತಿದ್ದ ದುಷ್ಟ ಜನರು ಸಿಟ್ಟಿಂದು ಮಾತಾಡಿದ್ದರೆ ನೀವಿಟ್ಟ ಆಣೆ. ಮಹಾತ್ಮರು ಎಲ್ಲವನ್ನೂ ಸಹನಮಾಡಿಕೊಂಡು ಒಮ್ಮೆ ತಮ್ಮ ಇಚ್ಛಿತಸ್ಥಳಕ್ಕೆ ಹೋಗಿ ಮುಟ್ಟಿದರು. ಈ ಪ್ರಕಾರ ಇವರು ಆಫ್ರಿಕೆಯಲ್ಲಿ ಕಾಲಿಟ್ಟಕೂಡಲೆ ಅನೇಕ ಪ್ರಕಾರದ ಅಪಮಾನ

ಗಳನ್ನೂ, ಕಷ್ಟನಷ್ಟಗಳನ್ನೂ ಅನುಭವಿಸುತ್ತ ವರ್ಷಾನಂತರ ಮರಳಿ ತಮ್ಮ ಮಾತೃಭೂಮಿಗೆ ಹೊರಡಬೇಕೆಂದು ಆಲೋಚಿಸಿದರು.

ಹೀಗೆ ಇವರು ಹಿಂದುಸ್ಥಾನಕ್ಕೆ ಬರಬೇಕೆಂದು ಹೊರಟರು ಅಷ್ಟರಲ್ಲಿ ಅಲ್ಲಿಯ ಸರಕಾರದವರು ಆಫ್ರಿಕೆಯಲ್ಲಿಬಂದಿದ್ದ ಹಿಂದೂ ಜನರ ಕೆಲವು ಹಕ್ಕುಗಳನ್ನು ತೆಗೆದು ಹಾಕುವದಕ್ಕಾಗಿ ಒಂದುಕಾಯದೆಯನ್ನು ಮಾಡತಕ್ಕವರಿರುವರೆಂಬ ಸುದ್ದಿಯನ್ನು ಇವರು ಕೇಳಿದರು ಆಗ ಅವರು ತಮ್ಮ ಸ್ವದೇಶ ಪ್ರವಾಸವನ್ನು ಅಷ್ಟಕ್ಕೇ ನಿಲ್ಲಿಸಿ ತಮ್ಮ ಹಿಂದುಬಾಂಧವರ ಹಕ್ಕಿನ ರಕ್ಷಣೆಗಾಗಿ ಸಾವಿರಾರು ಹಿಂದೂ ಜನರ ಸಹಿಯು ಒಂದು ಅರ್ಜಿಯನ್ನು ಸಿದ್ಧಪಡಿಸಿ ಅದನ್ನು ಸರಕಾರಕ್ಕೆ ಕಳಿಸಿದರು. ಈ ರೀತಿಯಿಂದ ಮಹಾತ್ಮರ ಸತ್ಯಾಗ್ರಹ ಚಳವಳಿಯು ಆಫ್ರಿಕೆಯಲ್ಲಿ ಆರಂಭವಾಯಿತು. ಹೀಗೆ ಒಮ್ಮಿಂದೊಮ್ಮೆ ಹಿಂದೂ ಜನರಲ್ಲಿ ನವೀನ ಜಾಗ್ರತೆಯುಂಟಾದದ್ದನ್ನು ಕಂಡು ಅಲ್ಲಿಯ ಸರಕಾರಕ್ಕೆಸಹ ಆಶ್ಚರ್ಯವೆನಿಸಿತು. ಹಿಂದೂ ಜನರು ಹೇಡಿಗಳಲ್ಲ ಅವರಲ್ಲಿಯೂಕೂಡ ನವಜೀವನವು ಉತ್ಪನ್ನವಾಗಿದೆ ಎಂಬರ್ಥದ ಉದ್ಗಾರಗಳು ಅಲ್ಲಿಯ ವರ್ತಮಾನ ಪತ್ರಗಳಲ್ಲಿ ಪ್ರಕಟವಾಗಹತ್ತಿದವು ಇವೆಲ್ಲಕ್ಕೂ ಮಹಾತ್ಮರ ಅವಿಶ್ರಾಂತ ಪರಿಶ್ರಮವೇ ಕಾರಣವಲ್ಲವೇ?

ಹಿಂದುಸ್ಥಾನದಿಂದ ಆಗ ಆಫ್ರಿಕಾಕ್ಕೆ ಕಳುಹಿಸಲ್ಪಡುತ್ತಿದ್ದ ಕೂಲಿಕಾರರ ಸ್ಥಿತಿಯು ಬಹುಶೋಚನೀಯವಾಗಿತ್ತು. ಅಲ್ಲಿಯ ವಸತಿಗಾರರು ಬೇಕಾದಂಥ ಜುಲುಮೆಯ ಕಾಯದೆ

ಗಳನ್ನು ಮಾಡಿಸಿ ಹಿಂದೂ ನಿವಾಸಿಗಳನ್ನು ಬಹು ಕೆಟ್ಟ ರೀತಿ ಯಿಂದ ನಡಸಿ ಕೊಳ್ಳುತ್ತಿದ್ದರು. ಮಹಾತ್ಮರು ತಮ್ಮ ಬಾಂ ಧವರ ದೈನ್ಯಾವಸ್ಥೆಯನ್ನು ಕಂಡು ಅವರಿಗೆ ಬಹಳೇ ಕೆಡಕೆನಿಸಿ ಅವ ರ ದುಃಸ್ಥಿತಿಯನ್ನು ದೂರ ಮಾಡಲಿಕ್ಕೆ ಬಹು ಪ್ರಯತ್ನವಾ ಡಿದರು. ಅಹಾ ಇದಲ್ಲವೇ ನಿಜವಾದ ಸ್ವಜನಾಭಿಮಾನವು. ಈ ಮಹನೀಯರು ಸನ್ ೧೮೯೪ನೇ ಇಸವಿಯಲ್ಲಿ ನಾತಾಲಾ ಎಂಬ ಪಟ್ಟಣದ ಕೆಲವು ಮುಂದಾಳುಗಳ ಸಹಾಯದಿಂದ "**ನಾ ತಾಲಾ ಇಂಡಿಯನ್ ಕಾಂಗ್ರೆಸ**" ಎಂಬ ಒಂದು ಸಂಸ್ಥೆಯನ್ನು ಸ್ಥಾಪಿಸಿ ಸ್ವತಃ ತಾವು ಆ ಸಂಸ್ಥೆಯ ಸೆಕ್ರೆಟರಿಗಳಾದರು. ಈ ಪ್ರಕಾರ ತಮ್ಮ ಕಷ್ಟ ನಷ್ಟಗಳನ್ನು ದೂರ ಮಾಡುವ ತಕ್ಕ ನಾ ಯಕರು ಲಭಿಸಿದ್ದರಿಂದ ಅಲ್ಲಿಯ ಹಿಂದೂ ನಿವಾಸಿಗಳಿಗೆ ಬಡ ವರ ಮನೆಗೆ **ಭಾಗ್ಯಲಕ್ಷ್ಮಿಯು** ತಾನೇ ಬಂದಂತೆ ಬಹು ಸಂ ತೋಷವೆನಿಸಿತು. ಹೀಗೆ ಬಹು ಜನರ ಆದರಕ್ಕೆ ಪಾತ್ರರಾದ ಮಹಾತ್ಮರು ಅಲ್ಲಿಯ ಹೊಸ ಸಂಸ್ಥೆಯ ಮುಖಾಂತರ ಅಲ್ಲಿ ಹಿಂದೂ ಜನರಿಗೆ ಆಗುತ್ತಿದ್ದ ತೊಂದರೆಗಳ ನಿವಾರಣಾರ್ಥ ವಾಗಿ ಅನೇಕ ಅರ್ಜಿಗಳನ್ನು ಸರಕಾರಕ್ಕೆ ಮಾಡಿದರು. ಆದರೆ ಅವುಗಳಿಂದ ಪ್ರಾರಂಭಕ್ಕೆ ಆಗತಕ್ಕಷ್ಟು ಫಲವೇನೂ ಆಗಲಿಲ್ಲ. ಯಾಕಂದರೆ ಸತ್ಕಾರ್ಯಕ್ಕೆ ಸಾವಿರ ವಿಘ್ನಗಳು.

ಮಹಾತ್ಮರು ಅಷ್ಟಕ್ಕೆ ಸುಮ್ಮನೆ ಕೂಡ್ರಲಿಲ್ಲ. ಯಾಕಂ ದರೆ ನುಡಿದಂತೆ ನಡೆಯುವದು. ಹಿಡಿದ ಕೆಲಸವನ್ನು ಪೂ ರ್ಣ ಮಾಡುವದು ಅವರ ಹುಟ್ಟು ಗುಣಗಳಾಗಿರುವವು. ಆದ್ದ ರಿಂದ ಆ ಮಹನೀಯರು ತಮ್ಮ ಧ್ಯೇಯವನ್ನು ಪೂರ್ಣಮಾಡ

ಮಾಡಲು ಸನ್ ೧೮೯೫ ನೇ ಇಸವಿಯಲ್ಲಿ ಹಿಂದುಸ್ಥಾನಕ್ಕೆ ಬಂದರು. ಮತ್ತು ಇಲ್ಲಿಯ ಮುಂಬೈ ಮುಂತಾದ ದೊಡ್ಡದೊಡ್ಡ ಪಟ್ಟಣಗಳಲ್ಲಿ ಸಭೆ ಕೂಡಿಸಿ ಸ್ಫೂರ್ತಿದಾಯಕವಾದ ಭಾಷಣವನ್ನು ಮಾಡಿದರು. ಇಲ್ಲಿಯ ಜನರು ದಕ್ಷಿಣ ಆಫ್ರಿಕದ ಹಿಂದೂಜನರ ದುಃಸ್ಥಿಯನ್ನುಕೇಳಿ ಬಹು ತಳಮಳಿಸಿದರು ಮತ್ತು ಅವರ ಕ್ಲೇಶ ನಿವಾರಣೆಯ ಉಪಾಯವನ್ನು ಯೋಚಿಸಹತ್ತಿದರು. ಹೀಗೆ ಮಹಾತ್ಮರು ಹಿಂದುಸ್ಥಾನದಲ್ಲಿ ಭಯಂಕರ ಚಳವಳಿಯನ್ನು ನಡೆಸಿರಲು ದಕ್ಷಿಣ ಆಫ್ರಿಕದ ನಾತಾಲಾ ಸರಕಾರದವರು ಇಲ್ಲಿಗೆ ಬಂದು ಹಾಜರಾಗ ಬೇಕೆಂದು ಮಹಾತ್ಮರ ಮೇಲೆ ಒಂದು ನೋಟೀಸು ತೆಗೆದರು. ಆದ್ದರಿಂದ ಇವರು ಸನ್ ೧೮೯೬ ನೇ ಇಸವಿಯಲ್ಲಿ ಆಫ್ರಿಕಾಕ್ಕೆ ಕುಟುಂಬಸಹಿತ ಪ್ರಯಾಣ ಮಾಡಿದರು.

**ಮಹಾತ್ಮರು** ಆಫ್ರಿಕಕ್ಕೆ ಬಂದ ೨-೩ ವರ್ಷಗಳ ಮೇಲೆ ಅಂದರೆ ಸನ್ ೧೮೯೯ ನೇ ಇಸ್ವಿಯಲ್ಲಿ ಬ್ರಿಟಿಶರಿಗೂ ಬೋಅರರಿಗೂ ಯುದ್ಧವು ಪ್ರಾರಂಭವಾಯಿತು. ಈಗ ನಿಜವಾದ ರಾಷ್ಟ್ರಭಕ್ತರ ಕೆಲಸವನ್ನು **ಗಾಂಧಿ**ಯವರು ಮಾಡಿದರು. ಆ ಸಮಯದಲ್ಲಿ **ಮೋಹನದಾಸರು** ತಮ್ಮ ಬ್ರಿಟಿಶ ಸರಕಾರದ ಅಂತಸ್ಥ ಮತಭೇದವನ್ನು ಮರೆತು ಅಲ್ಲಿಯ ತಮ್ಮ ಹಿಂದೂಜನರಿಗೆ ಚನ್ನಾಗಿ ತಿಳಿಹೇಳಿ ಸಾವಿರಾರು ಮಂದಿಯನ್ನು ಸರಕಾರಕ್ಕೆ ತನುಮನಧನಗಳಿಂದ ಬೇಕಾದ ಸಹಾಯ ಮಾಡಲಿಕ್ಕೆ ಸಿದ್ಧಮಾಡಿ, ಆ ಸಂಗತಿಯನ್ನು ಸರಕಾರಕ್ಕೆ ತಿಳಸಿದರು. ಆದರೆ ಸಾಶಂಕಮನಸ್ಸಿನ ಅಧಿಕಾರ

ವರ್ಗವು ಅದಕ್ಕೆ ಒಪ್ಪಲಿಲ್ಲ. (ಕಳ್ಳನ ಮನಸ್ಸು **ಹುಳ್ಳುಳ್ಳಗೆ**) ಮುಂದೆ ಕೆಲವು ದಿವಸಗಳಮೇಲೆ ಬೋಅರರ ಉಪಟಳವು ಅತಿ ಹೆಚ್ಚಾಗಲು ಯುದ್ಧಮಾಡಲಿಕ್ಕೆ ಬೇಕಾದವರು ಸಹಾಯ ಮಾಡಬಹುದೆಂದು ಸರಕಾರದವರು ಪ್ರಸಿದ್ಧ ಮಾಡಿದರು. ನೋಡಿರಿ. ಸೇರಿಗೆ ಸಪ್ವಾಸೇರು ಗಂಟುಬೀಳಲು ಆಗ ಬಡ **ಗಾಂಧಿ**ಯವರ ನೆನಪಾಯಿತು. (ಸಂಕಟ ಬಂದಾಗ ವೆಂಕಟರಮಣ)

ವಾಚಕ ಮಹಾಶಯರೇ ಈ ಪ್ರಸಂಗದಲ್ಲಿ **ಮಹಾಭಾರತದ ಕಥೆ**ಯೊಂದು ನೆನಪಾಗುವದು. **ಮಹಾತ್ಮರ** ಚರಿತ್ರೆಗೆ ಮಹಾ ಭಾರಥದಂಥಪವಿತ್ರಕಥೆಯ ಸಾಮ್ಯವು ಅತಿ ಮಹತ್ವದ್ದಲ್ಲವೆ? ಆದ್ದರಿಂದ **ಆ** ಕಥಾಭಾಗವನ್ನು ಹೇಳದಿದ್ದರೆ ನನ್ನ ಮನಸ್ಸು ಸಮಾಧಾನವೆನಿಸದು. ಕೇಳದಿದ್ದರೆ ನಿಮ್ಮ ಮನಸ್ಸೂ ಸೊಗಸಾಗುವದಿಲ್ಲ. ವೆಂಬುದನ್ನು ನಾನು ಬಲ್ಲೆನು. ತಸ್ಮಾತ್ ಆ ಕಥೆಯನ್ನಷ್ಟು ಸ್ವಲ್ಪದರಲ್ಲಿ ಹೇಳಿಬಿಡುವೆನು.

ಹಿಂದಕ್ಕೆ ದ್ವಾಪರ ಯುಗದಲ್ಲಿ ದುರ್ಯೋಧನಾದಿಗಳು ತಮ್ಮ ದಾಯಾದರಾದ **ಪಾಂಡವರನ್ನು** ಪರಿಪರಿಯಿಂದಕಾಡಿ ಬಹು ವಿಧದದುಃಖವನ್ನು ಕೊಟ್ಟು ಕಡೆಗೆ ಆ ಮಹಾಮಹಿಮರನ್ನು ಆಡವಿಗೆ ಕಳುಹಿದ ಕಥೆಯು ತಮಗೆ ಗೊತ್ತಿದ್ದ ಸಂಗತಿಯೇ ಅದೆ. ಆ ದುಷ್ಟರು ಅಷ್ಟಕ್ಕೇ ಸಮಾಧಾನರಾಗದೆ ಅವರ ಮನಸ್ಸು ಮತ್ತಷ್ಟು ನೋಯಿಸಬೇಕೆಂದು **ಘೋಷ**ಯಾತ್ರೆಯ ನೆವದಿಂದ ಪಾಂಡವರಿದ್ದೆಡೆಗೆ ಹೋದರು. ಅವರ

ಪರಿವಾರದಲ್ಲಿದ್ದ ಕೆಲವು ಸ್ತ್ರೀಯರು ಮಹಾ ಸಾಧ್ವಿಯಾದ **ದ್ರೌಪದೀದೇವಿಯ** ಬಳಿಗೆ ಹೋಗಿ ಆಕೆಯ ಮನಸ್ಸಿಗೆ ಹತ್ತುವಂತೆ ಕೆಲವು ಮಾತುಗಳನ್ನಾಡಿದರು. ಇತ್ತ ದುರ್ಯೋಧನಾದಿಗಳು ಅಲ್ಲಿಯೇ ಸಮೀಪದಲ್ಲಿದ್ದ ಒಬ್ಬ ಗಂಧರ್ವನ ತೋಟದಲ್ಲಿ ಹೊಕ್ಕು ಮನಬಂದಂತೆ ಅಲ್ಲಿ ವಿಹರಿಸುತ್ತಿದರು. ಆಗ ಉಪವನದೊಡೆಯನಾದ ಚಿತ್ರಸೇನನೆಂಬವನು ಕ್ರೋಧಯುಕ್ತನಾಗಿ ಬಂದು ಅವರೊಡನೆ ಯುದ್ಧಮಾಡಿ, ದುರ್ಯೋಧನನನ್ನು ಹೆಡಮುರಿಗೆ ಕಟ್ಟಿ ಒಯ್ದನು. ಕೌರವೇಶ್ವರನ ಮಡದಿಯಾದ ಭಾನುಮತಿಯು ಬಹು ದುಃಖದಿಂದ ಧರ್ಮರಾಯನ ಬಳಿಗೆ ಬಂದು ಆದ ಸಂಗತಿಯನ್ನೆಲ್ಲತಿಳಿಸಿ ತನ್ನ ಮುತ್ತೈದಿತನವನ್ನು ಉಳಿಸಿರೆಂದು ಕಾಲಿಗೆರಗಿ ಬೇಡಿಕೊಂಡಳು. ಅದನ್ನು ಕೇಳಿ ಧರ್ಮಜನು ಕಳವಳಗೊಂಡು ತಂಗೀ ಚಿಂತೆಮಾಡಬೇಡ. ಎಂದು ಆಕೆಯನ್ನು ಸಮಾಧಾನ ಪಡಿಸಿದನು.

ಬಳಿಕ ಧರ್ಮಾತ್ಮನಾದ ಮಹನೀಯನು ಆ ದುಷ್ಟ ಕೌರವಾದಿಗಳು ತಮ್ಮನ್ನು ಹಲವು ಬಗೆಯಾಗಿ ದುಃಖಪಡಿಸಿದ್ದರೂ ಅದನ್ನೆಲ್ಲ ಮರೆತು, ದುರ್ಯೋಧನನನ್ನು ಬಿಡಿಸಿಕೊಂಡುಬರಲು ಅರ್ಜುನನ್ನು ಕಳುಹಿದನು. ಆತನು ದುರ್ಯೋಧನನ್ನು ಬಿಡಿಸಿಕೊಂಡು ಬಂದನು. ಹೀಗೆ ಭಾರತ ಕಥೆಯುಂಟು.

ಅದರಂತೆ ನಮ್ಮ **ಮಹಾತ್ಮಾಜಿಯವರು** ದಕ್ಷಿಣಆಫ್ರಿಕದ ಬ್ರಿಟಿಶ ಸರಕಾರಕ್ಕೆ ಬಹುಪರಿಯಿಂದ ಸಹಾಯ ಮಾಡಿದರು. ಅವರು ಹಲವು **ಸ್ವಯಂಸೇವಕರ** ಮುಂದಾಳಾಗಿ

ಯುದ್ಧದಲ್ಲಿ ಸಹಾಯ ಮಾಡಿದರು. ಎಷ್ಟೋ ಪ್ರಸಂಗದಲ್ಲಿ ಗುಂಡಿನ ಮಳೆ ಸುರಿಯುತ್ತಿದ್ದರೂ ಜೀವದ ಅಂಜಿಕೆ ಇಲ್ಲದೆ ಮುಂದರಿದು ಹೋಗಿ ಗಾಯಪಟ್ಟವರನ್ನು ಸುರಕ್ಷಿತ ಸ್ಥಳಕ್ಕೆ ಮುಟ್ಟಿಸುವ ಕೆಲಸವನ್ನು ಈ ವೀರರು ಸ್ವತಃ ತಾವೇಮಾಡುತ್ತಿದ್ದರು. ಇವರ ಈ ಅಗಾಧ ಕೃತಿಯನ್ನು ಕಂಡು ಅಲ್ಲಿಯ ನಿವಾಸಿಗಳು ಇವರನ್ನು ಕೊಂಡಾಡಿದರು.

ಇನ್ನೊಮ್ಮೆ ಝೂಲೂಎಂಬ ಪುಂಡಜನರು ಸಹಕಾರದ ವಿರುದ್ಧ ಬಂಡು ಮಾಡಿದರು. ಆಗಿನ ಪ್ರಸಂಗದಲ್ಲಿಯಾದರೂ **ಮಹಾತ್ಮರು** ತಮ್ಮ **ಸ್ವಯಂಸೇವಕ**ರೊಡನೆ ಸರಕಾರಕ್ಕೆ ಬಹುಪರಿಯಿಂದ ಸಹಾಯಮಾಡಿರುವರು.

ಬೋಅರರ ಯುದ್ಧವು ಮುಗಿದು ಟ್ರಾನ್ಸವಾಲವು ಸಂಪೂರ್ಣ ಬ್ರಿಟಿಶರ ಕೈವಶವಾಯಿತು. ಇನ್ನುಮೇಲಾದರೂ, ಹೊಸರಾಜ್ಯ ವ್ಯವಸ್ಥೆಯಲ್ಲಿ ಹಿಂದೂ ಜನರನ್ನು ಬ್ರಿಟಿಶರು ನ್ಯಾಯದಿಂದ ನಡಸಿಕೊಂಡಾರೆಂದು **ಮಹಾತ್ಮರು** ತಿಳಿದಿದ್ದರು. ಆದರೆ ಅವರ ಆ ಕಲ್ಪನೆಯು ಮನಸ್ಸಿನಲ್ಲಿ ಮಾಡಿದ ಮಂಡಿಗೆಯಾಯಿತು. ಯಾಕೆಂದರೆ ಬೋಅರರಿಗಿಂತಲೂ ಹೊಸ ಸತ್ತಾಧೀಶರು ಹಿಂದೂ ಜನರನ್ನು ಬಹಳೇ ಕೆಟ್ಟರೀತಿಯಿಂದ ನಡಿಸಿಕೊಳ್ಳುತ್ತಿದ್ದರು. ಕೂಡಲೆ **ಮಹಾತ್ಮರು** ಅಲ್ಲಿಯಅಧಿಕಾರಿಗಳಬಳಿಗೆ ಹೋಗಿ ತಮ್ಮ ಬಾಂಧವರ ಕಷ್ಟನಿವಾರಣೆಬಗ್ಗೆ ಹೇಳಿಕೊಳ್ಳಲು, ಆಗ ಅವರು ನೀವು ಈ ವಿಷಯದಲ್ಲಿ ಕೈಹಾಕುವ ಕಾರಣವಿಲ್ಲ. ನಮ್ಮ ಮನಸ್ಸಿಗೆ ಬಂದಂತೆ ನಾವು ವ್ಯವಸ್ಥೆ ಮಾಡುತ್ತೇವೆ. ಎಂದು ಸ್ಪಷ್ಟವಾಗಿ ಹೇಳಿಬಿಟ್ಟರು.

ಕೇಳಿದಿರಾ! ರಾಜನಿಷ್ಠರಿಗೆ ಕೊಡುವ ಪ್ರತಿಫಲವನ್ನು ಶಾಹ ಬಾಸ ಪ್ರಜಾನಿಷ್ಠ ಸರಕಾರವೇ ಇರಲಿ,-

**ಮಹಾತ್ಮರು** ಅದಕ್ಕೆ ಅಂಜದೆ ತಮ್ಮ ಪ್ರಯತ್ನವನ್ನು ದೃಢನಿಶ್ಚಯದಿಂದ ಸಾಗಿಸಿದರು. ಕಾಯದೆ ಬಲದಿಂದ ಬಡದಾಡಿ ತಮ್ಮ ಧ್ಯೇಯವನ್ನು ಸಾಧಿಸುವ ಉದ್ದೇಶದಿಂದ ಫ್ರಿಟೋರಿಯಾ ಹಾಯಕೋರ್ಟಿನಲ್ಲಿ ಕೆಲಸವಮಾಡುವದಕ್ಕಾಗಿ ಬ್ಯಾರಿಷ್ಟರಿಯ ಸನದು ಪಡೆದರು. ಮತ್ತು ಇಂಡಿಯನ್ **ಒಪಿನಿಯನ್** ಎಂಬ ವರ್ತಮಾನ ಪತ್ರವನ್ನು ಸ್ವತಃ ತೆಗೆಯಲಾರಂಭಿಸಿದರು.

ಹೀಗೆ **ಮಹಾತ್ಮರು** ತಮ್ಮ ಬಾಂಧವರ ಕಷ್ಟನಿವಾರಣೆಯದೆಸೆಯಿಂದ ದೀರ್ಘೋದ್ಯೋಗವನ್ನು ನಡೆಸಿರಲು, ಗಾಯದಲ್ಲಿ ಮುಳ್ಳುನಟ್ಟಂತೆ ಅಲ್ಲಿಯ ಸರಕಾರದವರು ರಜಿಸ್ಟ್ರೇಶನ್ ಎಂಬ ಹೊಸಕಾಯದೆಯನ್ನು ಮಾಡಿದರು. ಈ ಕಾಯದೆಯಿಂದ ಆಫ್ರಿಕೆಯೊಳಗಿನ ಏಶ್ಯಾಟಿಕ ಜನರೆಲ್ಲ ತಮ್ಮ ಹೆಬ್ಬೆರಳಿನ ಗುರ್ತುಕೊಟ್ಟು ತಮ್ಮ ಹೆಸರನ್ನು ರಜಿಸ್ಟರ ಮಾಡಿಸಿಕೊಳ್ಳುವ ಪ್ರಸಂಗ ಬಂತು. ಈ ಪ್ರಕಾರ ಅತ್ಯಂತ ನಿಂದ್ಯಕರವಾದ ಕಾಯಿದೆಯಿಂದ ಬ್ರಿಟಿಶ ಮುತ್ಸದ್ದಿಗಳು ಏಶಿಯಾಟಿಕ ಜನರನ್ನು ನೀಚ ಜನರ ಪಂಗ್ತಿಯಲ್ಲಿ ಕೂಡ್ರಿಸುವ ಹಂಚಿಕೆಯನ್ನು ತೆಗೆದರು.

ಈ ಅತ್ಯಂತ ಅಪಮಾನಕರವಾದ ಕಾಯಿದೆಯು **ಮಹಾತ್ಮರಿಗೆ** ಏನೂ ಸಹನವಾಗಲಿಲ್ಲ. ಆದ್ದರಿಂದ ಅವರು ಈ ಕಾಯಿದೆಯನ್ನು ರದ್ದುಪಡಿಸಬೇಕೆಂದು ಅಲ್ಲಿಯ ಕಾಯಿದೆ

ಯ ಮಂಡಲದವರಿಗೆ ವಿನಂತಿ ಮಾಡಿಕೊಂಡರು. ಅದು ಬೋರ್ಗಲ್ಲಿನಮೇಲೆ ಮಳೆಸುರಿದಂತಾಯಿತು. ಈ ಮಹನೀಯರು ಇಷ್ಟಕ್ಕೆಸುಮ್ಮನಿರದೆ ಮಿ॥ ಅಲ್ಲಿಎಂಬವರೊಡನೆ ವಿಲಾಯತಿಗೆಹೋಗಿ ಮೇಲಿನ ಜುಲುಮೆ ಕಾಯದೆಗೆ ಬಾದಶಹರ ಒಪ್ಪಿಗೆಯು ಸಿಗದಂತೆ ಪ್ರಯತ್ನಮಾಡಿದರು. ಹೀಗೆ ತಮ್ಮ ಬಾಂಧವರ ದಾಸ್ಯವಿಮೋಚನೆಗಾಗಿ ಸ್ವತಃಕಷ್ಟಗಳನ್ನು ಅನುಭವಿಸಿದ **ಮಹಾತ್ಮರೇ** ಧನ್ಯರು.

---

## ಮಹಾತ್ಮರ ಆಫ್ರಿಕೆಯ [ಕಾರಾಗೃಹ]ವಾಸ

### ಸನ್ ೧೯೦೧-೧೯೧೪

ಆಫ್ರಿಕೆಯೊಳಗಿನ ಏಶಿಯಾಟಿಕ ಜನರು ತಮ್ಮನ್ನು ರಜಿಸ್ಟರು ಮಾಡಿಸಿಕೊಂಡು ಮಾನಹಾನಿಗೆ ಗುರಿಯಾಗಬೇಕೋ, ಅಥವಾ ಕಾಯದೆಗೆ ವಿರುದ್ಧವಾಗಿ ನಡೆದು ಸಂಕಟ ಸಾಗರದಲ್ಲಿ ಮುಳುಗಬೇಕೋ ಎಂಬ ವಿಚಾರದಲ್ಲಿ ಮಗ್ನರಾದರು. ಇಂಥ ಬಿಕ್ಕಟ್ಟಿನ ಪ್ರಸಂಗದಲ್ಲಿ ಯೋಗ್ಯ ಹಿತೋಪದೇಶವನ್ನು ಮಾಡಿ ಸಂಕಟದೊಳಗಿಂದ ಪಾರುಮಾಡುವ **ಮಹಾತ್ಮರಂಥ** ಮಾರ್ಗದರ್ಶಕರು ಅವರಿಗೆ ಬೇಕಾಗಿತ್ತು. ಆದ್ದರಿಂದ ಎಲ್ಲರೂ **ಮಹಾತ್ಮರ** ಬಳಿಗೆ ಬಂದು ತಮ್ಮ ಸುಖದುಃಖವನ್ನು ಹೇಳಿಕೊಂಡರು. ಆಗ ಈ ಮಹನೀಯರು ಸರ್ವ ಹಿಂದೂ

ಜನರನ್ನು ಕುರಿತು- ಎಲೈ ಪ್ರಿಯದೇಶಬಾಂಧವರೆ! ಈ ಸಮಯದಲ್ಲಿ ನೀವು ಸ್ವಕರ್ತವ್ಯ ಪರಾಙ್ಮುಖರಾದರೆ ಸ್ವಧರ್ಮ ಸ್ವದೇಶಕ್ಕೆ ಕಲಂಕವನ್ನುಂಟುಮಾಡುವ ಮಹಾಪಾತಕಕ್ಕೆ ಗುರಿಯಾಗಬೇಕಾಗುವದು ನಿಮ್ಮ ಮುಂದಿನ ಸಂತತಿಯು ಈ ಹೇಡಿತನದ ಕೃತಿಯಬಗ್ಗೆ ನಿಮ್ಮನ್ನು ನಿರಂತರವಾಗಿ ನಿಂದಿಸಬಹುದು. ನೀವು ಕಾಯಿದೆಗೆ ತಲೆಬಾಗಿಸಿದರೆ ಮುಂದೆ ಇದಕ್ಕೂ ಆಪಮಾನಕರವಾದ ಕಾಯಿದೆಯು ರೂಢಿಯಲ್ಲಿ ಬರಬಹುದು. ಆಗಾದರೂ ನೀವು ಕಾಯದೆಯನ್ನು ಉಲ್ಲಂಘನ ಮಾಡಲೇಬೇಕಾಗುವದು. ಈ ಪ್ರಸಂಗದಲ್ಲಿ ನೀವು ನಿಮ್ಮ ಆತ್ಮಬಲವನ್ನು ಸತ್ಯಾಗ್ರಹದಿಂದ ನಿದರ್ಶನಕ್ಕೆ ತಂದು ಕೊಡಲು ಒಂದು ಕಾಲುಮೇಲೆ ಸಿದ್ಧರಿದ್ದೇವೆಂಬುದನ್ನು ಇಲ್ಲಿಯ ವಸತಿಗಾರರಿಗೆ ತಿಳಿಸಲಿಕ್ಕೆ ಹಿಂಜರಿಯಬಾರದು. ಎಂದು ತಮ್ಮ ಅಮೋಘವಾಣಿಯಿಂದ ಉಪದೇಶಮಾಡಿದರು.

**ಮಹಾತ್ಮರ** ಅಧಿಕಾರಯುಕ್ತವಾಣಿಯು ಎಲ್ಲರಲ್ಲಿಯೂ ನವಚೇತನವನ್ನುಂಟುಮಾಡಿತು. ಆಗ ಸಕಲರೂ ಐಕ್ಯಭಾವದಿಂದ ಎದ್ದುನಿಂತು ಸರಕಾರದವರು ಈ ಜುಲುಮೆಕಾಯದೆಯನ್ನು ರದ್ದುಪಡಿಸುವವರೆಗೆ ಎಲ್ಲರೂ ಸತ್ಯಾಗ್ರಹವನ್ನು ಮಾಡತಕ್ಕದ್ದೆಂದು ಏಕಕಂಠದಿಂದ **ಪರಮೇಶ್ವರನ** ಸಾಕ್ಷಿಯಾಗಿ ಪ್ರತಿಜ್ಞೆಮಾಡಿ ಹೇಳಿದರು. ಈ ಪ್ರಕಾರ ನಮ್ಮ **ಮಹಾತ್ಮಾಜಿಯವರು** ಅದ್ಭುತವಾದ ಪ್ರಯತ್ನದಿಂದ ಎಷ್ಟೋವರ್ಷಗಳಿಂದ ದಾಸ್ಯವೃತ್ತಿಯಲ್ಲಿ ಕೊಳಯುತ್ತಿದ್ದಸಾವಿರಾರು ಹಿಂದೂ ಜನರಲ್ಲಿ ನವೀನ ಜಾಗ್ರತೆಯನ್ನುಂಟುಮಾಡಿದರು.

ಇತ್ತ ಅಧಿಕಾರಿಗಳೂ ಜನರು ಇದ್ದಲ್ಲಿಗೆ ಹೋಗಿ ರಜಿಸ್ಟರ ಮಾಡುವ ಉದ್ಯೋಗವನ್ನು ಒಳ್ಳೇ ಒತ್ತರೆದಿಂದ ನಡೆಸಿದರು. ಆದರೆ ಬಹು ಜನರು ತಮ್ಮ ಪ್ರತಿಜ್ಞಾಭಂಗವಾಗಗೊಡದೆ ನೋಂದಣಿ ಕೆಲಸವನ್ನು ಹರಕತ್ತು ಮಾಡಿದರು. ಆದ್ದರಿಂದ ರಜಿಸ್ಟರಮಾಡಿಸಿಕೊಳ್ಳಲಿಕ್ಕೆ ಒಪ್ಪದಿದ್ದವರಿಗೆ ಕಾರಾಗೃಹದ ಶಿಕ್ಷೆಯು ಪ್ರಾರಂಭವಾಯಿತು. ಸೆರೆಮನೆಯು ಸತ್ಯಾಗ್ರಹಿಜನರಿಂದ ತುಂಬಿಹೋಯಿತು. ಸೆರೆಮನೆಯೆಂದರೆ ಸ್ವಯಂವರ ಮಂಟಪದಂತೆ ತಿಳಿದು ಸರ್ವರೂ ಸ್ವಸಂತೋಷದಿಂದ ಹೋಗಹತ್ತಿದರು. ಶಹಬಾಸ! ಬಾಂಧವರೇ ನೀವೇಧನ್ಯರು! ಈ ಪ್ರಸಂಗದಲ್ಲಿ **ಮಹಾತ್ಮರೂ** ಬಂಧಿಸಲ್ಪಟ್ಟರು. ನ್ಯಾಯಾಧೀಶರಮುಂದೆ ನ್ಯಾಯ ವಿಚಾರಣೆಯು ಪ್ರಾರಂಭವಾಯಿತು. ಆಗ ಅವರು ಕೋರ್ಟಿನಲ್ಲಿ ಈ ಸತ್ಯಾಗ್ರಹದ ಚಳವಳಿಗೆ ನಾನೇಕಾರಣನು ಈ ಅಪರಾಧಕ್ಕಾಗಿ ಸರಕಾರವು ಬೇಕಾದಂಥ ಶಿಕ್ಷೆಯನ್ನು ವಿಧಿಸಿದರೂ ಭೋಗಿಸಲಿಕ್ಕೆ ಈ ದೇಹವು ಸಿದ್ಧವಾಗಿರುವದು. ಎಂದು ಬಹು ಧೈರ್ಯದಿಂದ ಹೇಳಿಬಿಟ್ಟರು. ಇವರ ಈ ಎದೆಗಾರಿಕೆಯ ಭಾಷಣವನ್ನು ಕೇಳಿ ಅಧಿಕಾರಿಗಳಿಗೆ ಸಹ ಆಶ್ಚರ್ಯವೆನಿಸಿತು. ಆದರೇನಾಯಿತು. ಅವರು ತಮ್ಮ ಮಾಮೂಲಿನಂತೆ ಎರಡು ವರ್ಷದ ಕಠಿಣಶಿಕ್ಷೆಯನ್ನು ವಿಧಿಸಿಬಿಟ್ಟರು (ಇದಕ್ಕೂ ಮೊದಲು ಎರಡು ತಿಂಗಳು ಸಾದಾ ಶಿಕ್ಷೆಯಾಗಿತ್ತು.)

ಈಸಾರೆಮಾತ್ರ **ಮಹಾತ್ಮರು** ಸೆರೆಮನೆಯಲ್ಲಿ ಬಹಳ ಕಷ್ಟ ಸೋಸಬೇಕಾಯಿತು. ಅಲ್ಲಿ ಒಮ್ಮೆ ಪ್ರಖರವಾದ ಬಿಸಲಿ

ನಲ್ಲಿ ಗುದ್ದಲಿಯಿಂದ ಕಠಿಣವಾದ ನೆಲವನ್ನು ಅಗಿಯಲಿಕ್ಕೆ ಹಚ್ಚಿದವರು. ಒಮ್ಮೆ ಹೊಲದಲ್ಲಿ ಬೇರೆಬೇರೆ ಕೆಲಸವನ್ನು ಮಾಡಲಿಕ್ಕೆ ಹಚ್ಚುವರು. ಈ ಅಭ್ಯಾಸವಿಲ್ಲದೆ ಕೆಲಸದಿಂದ ಅವರ ಕೈಗಳಲ್ಲಿ ಗುಳ್ಳೆಗಳ ಏಳುತ್ತಿದ್ದವು ಇಷ್ಟಾದರೂ ಈ **ಮಹನೀಯರು** ಎಲ್ಲವನ್ನು ಶಾಂತರೀತಿಯಿಂದ ಸಹಿಸಿಕೊಳ್ಳುತ್ತಿದ್ದರು. ಒಮ್ಮೆ ಜೈಲರನು ಶೌಚಕೂಪವನ್ನು ಸ್ವಚ್ಛ ಮಾಡಲಿಕ್ಕೆ ಇವರ ಸಂಗಡಿದ್ದವರಿಗೆ ಹೇಳಿದನು ಆದರೆ ಆ ಅಸಹ್ಯ ಕೆಲಸವನ್ನು ಎರಡನೇಯವರಿಗೆ ಮಾಡಗೊಡದೆ, **ಮಹಾತ್ಮರು** ಸ್ವತಃ ಮಾಡಿ ಬಂದರಂತೆ, ಹಾಯ್ ಹಾಯ್ **ಮಹಾತ್ಮಾ!** ನೀನು ನಮ್ಮ ಬಾಂಧವರಸಲುವಾಗಿ ಎಷ್ಟು ಸಂಕಟಗಳನ್ನು ಅನುಭವಿಸಿ, ಎಂಥ ಅಸಹ್ಯ ಕೆಲಸವನ್ನುಸಹ ಮಾಡಿಬಂದಿರುವಿ. ನಿನ್ನ ಸಲುವಾಗಿ ನಾವು ಎಷ್ಟು ಕೃತಜ್ಞತೆಯನ್ನು ತೋರಿಸಿದರೂ ಸ್ವಲ್ಪವೇಸರಿ.

**ಮಹಾತ್ಮರು** ಕಾರಾಗೃಹದಲ್ಲಿ ಅನೇಕ ವಿಧದ ಕಷ್ಟಗಳನ್ನು ಅನುಭವಿಸಿ ಎರಡು ವರ್ಷಗಳನಂತರ ಬಿಡುಗಡೆಯಾಗಿ ಬಂದರು. ಅವರು ಬಂದಬಳಿಕ ಸುಮ್ಮನೆ ಕೂಡ್ರದೆ ದಕ್ಷಿಣ ಆಫ್ರಿಕೆಯಲ್ಲಿ ಹಿಂದೂ ಜನರಮೇಲೆ ಆಗುತ್ತಿದ್ದ ಅನ್ಯಾಯದ ಬಗ್ಯೆ ಲೋಕಮತವನ್ನು ಜಾಗ್ರತೆಗೊಳಿಸುವದಕ್ಕಾಗಿ ವಿಲಾಯತಿಗೊಂದು ನಮ್ಮ ಹಿಂದುಸ್ಥಾನಕ್ಕೊಂದು ಹೀಗೆ ಎರಡು ಡೆಪ್ಯುಟೇಶನ್‌ಗಳನ್ನು ಕಳಿಸಿದರು. ವಿಲಾಯತಿಗೆ ಡೆಪ್ಯುಟೇಶನ್ ತೆಗೆದುಕೊಂಡು ತಾವೇ ಹೋದರು. ಹಿಂದುಸ್ಥಾನಕ್ಕೆ ಮಾತ್ರ ತಮ್ಮ ಪ್ರಿಯಶಿಷ್ಯರಾದ ಡ್ಯಾ॥ **ಪೋಲಕ** ಎಂಬವ

ರನ್ನು ಕಳುಹಿಸಿದರು. ಇವರು ಬಂದಕೂಡಲೆ ಆಗಿನ ಕಾಲದ ಪ್ರಸಿದ್ಧ ಮುಖಂಡರಾಗಿದ್ದ **ನಾ॥ ಗೋಖಲೆಯುವರನ್ನು** ಕೂಡಿಕೊಂಡು ಇಡೀ ಹಿಂದುಸ್ತಾನವನ್ನೆಲ್ಲ ಸಂಚರಿಸಿ ಆಫ್ರಿಕೆ ಕೆಯೊಳಗಿನ ಹಿಂದೂ ಜನರ ದುಃಖಸ್ಥಿತಿಯನ್ನು ತಿಳಿಸಿದರು. ಈ ಕೆಲಸದಲ್ಲಿ **ನಾ॥ ಗೋಖಲೆ**ಯವರು ಒಳ್ಳೇಸಹಾಯ ಮಾಡಿದರು. ಅವರು ವರಿಷ್ಟಕಾಯಿದೆ ಕೌನ್ಸಿಲ್ಲದಲ್ಲಿ ಆಫ್ರಿಕೆಯಲ್ಲಿ ಆದ ಮಾನಹಾನಿಕರವಾದ ಕಾಯಿದೆಯನ್ನು ರೆದ್ದು ಮಾಡುವಬಗ್ಗೆ ಒಂದು ಠರಾವು ತಂದು, ಅದರಮೇಲೆ ಒಳ್ಳೇ ಪರಿಣಾಮಕಾರಕವಾದ ಭಾಷಣವನ್ನು ಮಾಡಿದರು ಅವರ ಭಾಷಣಕ್ಕೆ ಮರುಳಾದ ಎಷ್ಟೋ ಸಭಾಸದರು ಅವರಂತೆ ಅಮೋದನಕೊಟ್ಟರು. ಆದ್ದರಿಂದ ಹಿಂದುಸ್ತಾನ ಸರಕಾರವು ಬಹುಮತಕ್ಕೆ ಮಾನಕೊಡಬೇಕಾಯಿತು.

ಅತ್ತ **ಮಹಾತ್ಮರು** ವಿಲಾಯಿತೆಗೆ ಹೋಗಿ ತಮ್ಮ ಮತದ **ಸ್ವಯಂಸೇವಕ**ರನ್ನು ಕೂಡಿಸಿ ಅಲ್ಲಿಯ ಲೋಕಮತವನ್ನು ಜಾಗ್ರತಿಗೊಳಿಸುವ ವ್ಯವಸ್ಥೆಯನ್ನು ಮಾಡಿ ಮರಳಿ ಆಫ್ರಿಕಕ್ಕೆ ಬಂದರು. ಈ ಬಗೆಯ ಎರಡೂಕಡೆಯ ಪ್ರಯತ್ನದಿಂದ ವಿಲಾಯತಿಯ ಸರಕಾರದವರು ಆಫ್ರಿಕೆಯಲ್ಲಿ ಆದ ನೋಂದಣಿಕಾಯದೆಯು ಒಂದು ಪರ್ಷದವುಟ್ಟಿಗೆ ರೂಢಿಯಲ್ಲಿ ಬರಬಾರದೆಂಬ ಸುಧಾರಣೆಯನ್ನು ಮಾಡಿದರು.

ಒಂದು ಸುಧಾರಣೆಯಾಗುವದರೊಳಗೆ ಮತ್ತೊಂದು ಸುಧಾರಣೆಯು ತಲೆದೋರಿತು. ದಕ್ಷಿಣ ಆಫ್ರಿಕೆಯ ಯೂನಿಯನ್ ಸರಕಾರದವರು ತಮ್ಮ ಕಾಯದೆ ಕೌನ್ಸಿಲದಲಿ

ಹಿಂದೂ ಅಥವಾ ಮುಸಲ್ಮಾನ ಪದ್ಧತಿಯಂತೆ ಆದ ವಿವಾಹ ಗಳು ಕಾಯಿದೆಯ ವಿರುದ್ಧವೆಂದು ತಿಳಿಯಲ್ಪಡುವದು ಎಂಬ ಅನ್ಯಾಯ ಹಾಗು ಅಪಮಾನಕರವಾದ ಕಾಯಿದೆಯನ್ನು ಮಾಡಿದರು. ಈ ಕಾಯಿದೆಯಿಂದ ಹಿಂದೂ ಮುಸಲ್ಮಾನರ ಲಗ್ನದ ಹೆಂಡರನ್ನೆಲ್ಲ ವೇಶ್ಯರೆಂದು ನಿರ್ಣಯಿಸಿ ಅವರ ಸಂತತಿಗೆ ಸ್ವಾಭಾವಿಕವಾಗಿ ಉಂಟಾಗುವ ಆಪ್ತತ್ವದ ಅಧಿಕಾರವನ್ನು ಹುಟ್ಟುಗೊಡದೆ ಅವರ ಆಸ್ತಿಯನ್ನೆಲ್ಲ ಮನಬಂದಂತೆ ವಿನಯೋಗವಮಾಡಿಕೊಳ್ಳಬೇಕೆಂಬ ಒಂದು ಹೊಸಯುಕ್ತಿಯನ್ನು ಹುಡಕಿ ತೆಗೆದರು. ನೋಡಿದಿರಾ? ಪ್ರಜೆಗಳನ್ನು ಹೊಟ್ಟೆಯ ಮಕ್ಕಳಂತೆ ಕಾಪಾಡುವ ವಿಧಾನವನ್ನು ಹೀಗೆ ಅಲ್ಲಿಯ ಸರಕಾರದವರು ನಮ್ಮ ಬಾಂಧವರನ್ನು (೧) ಮೂರು ಪೌಂಡಿನ ತಲೆಪಟ್ಟಿ (೨) ನೊಂದಣಿ ಕಾಯಿದೆ (೩) ವಿವಾಹದ ಕಾಯದೆ ಎಂಬ ಮೂರು ಕಾಯದೆಗಳಿಂದ ಮೂರಾಬಟ್ಟೆ ಮಾಡಲು ಪ್ರಯತ್ನಮಾಡಿದರು.

ಆದರೆ ಇವೆಲ್ಲ ಕುಟಿಲ ಕಾರಸ್ಥಾನವನ್ನು ಕಂಡು **ಮಹಾತ್ಮರಿಗೆ** ಬಹು ಕೆಡಕೆನಿಸಿತು. ತಮ್ಮ ಬಾಂಧವರನ್ನು ಇಷ್ಟೊಂದು ಅನ್ಯಾಯ ಹಾಗು ಅಪಮಾನಕರವಾದ ಸ್ಥಿತಿಯಲ್ಲಿ ನಡಿಸಿಕೊಳ್ಳುವದು ಇವರಿಗೆ ಏನೂ ಸಹನವಾಗಲಿಲ್ಲ. ಆದ್ದರಿಂದ ಈ ಮಹನೀಯರು ಸತ್ಯಾಗ್ರಹವೆಂಬ ವೀರಾಸ್ತ್ರವನ್ನು ಧರಿಸಿ ಆ ಮೂರು ಕಾಯದೆಗಳನ್ನು ಭಂಗಪಡಿಸಲಿಕ್ಕೆ ಬದ್ಧಕಂಕಣರಾಗಿ ನಿಂತುಬಿಟ್ಟರು. ಅಲ್ಲಿಂದ ಕೇಳುವದೇನದೆ ಪಾರ್ಥನು ಪಾಶುಪತಾಸ್ತ್ರವನ್ನು ಧರಿಸಿದಂತೆಯೇ ಆಯಿತು

ತ್ರಿಭುವನವು ನಡುಗಿತು ವೈರಿಗಳ ಕಲ್ಲೆದೆಯು ತಲ್ಲಣಗೊಂಡಿ
ತು ದುರ್ಜನರ ದುರಾಲೋಚನೆಯು ಸಾಧಿಸದಂತಾಯಿತು
ಕಟ್ಟಕಡೆಗೆ ಕಾಯದೆಎಂಬ ಕಾಳರಕ್ಕಸನು ಕೂಳುನೀರಿಲ್ಲದೆ
ಕೊರಗಿ ಕಾಲಾಧೀನನಾದನು. ಅಹಾ ಇದಲ್ಲವೇ ನಿಶ್ಶಸ್ತ್ರಪ್ರತಿ
ಕಾರದ ಪ್ರತಿಫಲವು.

**ಮಹಾತ್ಮರ** ಸತ್ಯಾಗ್ರಹ ಚಳವಳಿಯು ಒಳ್ಳೇ ಜೋರಿ
ನಿಂದ ನಡೆಯಿತು. ಇವರ ಸಾಹಸ ಕಾರ್ಯಕ್ಕೆ ಸಕಲ
ಹಿಂದೂ ಜನರು ಒಕ್ಕಟ್ಟಿನಿಂದ ಸಹಾಯ ಮಾಡಿದರು. ಸಾ
ಧ್ವೀಮಣಿಯರು ಸಹಿತ ಸ್ವಯಂಸೇವಕರಾಗಿ ದೇಶಕಾರ್ಯ
ವನ್ನು ಮಾಡಲಿಕ್ಕೆ ಸನ್ನದ್ಧರಾದರು ಕಾಯದೇ ಭಂಗವು
ಪ್ರಾರಂಭವಾಯಿತು. ಇವೆಲ್ಲ ಕೃತಿಗಳನ್ನು ನಾಶಗೊಳಿಸಲಿಕ್ಕೆ
ಸರಕಾರದ ಅಬ್ಬರದ ದಬ್ಬಾಳಿಕೆಯೂ ಆರಂಭವಾಯಿತು.
ಮೊದಲು ನೂರಾರು ಸ್ತ್ರೀಸಮೂಹವು ಬಂಧಿಸಲ್ಪಟ್ಟಿತು. ಅವ
ರಲ್ಲಿ ಎಷ್ಟೋ ಕೋಮಲ ಬಾಲಿಕೆಯರೂ, ಗರ್ಭವತಿಯರೂ
ಇದ್ದರು. ಕೆಲಕೆಲವರಂತೂ ತಮ್ಮ ಹಸುಮಕ್ಕಳನ್ನು ಹಾಸಿ
ಗೆಯಮೇಲೆ ಚಲ್ಲಿಕೊಟ್ಟು ತುರಂಗದ ಹಾದಿಯನ್ನು ಹಸನ್ಮು
ಖಿಗಳಾಗಿ ಹಿಡಿದರು. ಈ ಪ್ರಚಂಡ ಸ್ತ್ರೀ ಸಮಾಜದಲ್ಲಿ ನಮ್ಮ
**ಮಹಾತ್ಮರ** ಸಹಧರ್ಮಿಣಿಯಾದ ಸೌ|| **ಕಸ್ತೂರೀದೇ
ವಿಯವರೂ** ಇದ್ದರು. ಕಡೆಗೆ ಎಲ್ಲರೂ ಒಂದಡೆಯಲ್ಲಿ
ಬಹು ಕಷ್ಟದಿಂದ ಕಾರಾಗೃಹವನ್ನು ಅನುಭವಿಸಿದರು ಶಿವ
ಶಿವಾ ನಿರಪರಾಧಿಗಳಾದ ಅಬಲೆಯರರ ಕಾರಾಗೃಹದ ವಾ
ಸವೇ? ಇದೆಂಥ ಅನ್ಯಾಯವೋ ನಾಕಾಣೆ.

ಇತ್ತ **ಮ. ಗಾಂಧಿ**ಯವರು ತಮ್ಮ ಪ್ರಯತ್ನವನ್ನು ಒಳ್ಳೇ ಜೋರಿನಿಂದ ನಡೆಸಿದರು. ಮತ್ತು ಯೂನಿಯನ್ ಸರಕಾರಕ್ಕೆ ನಾನು ಇನ್ನುಮೇಲೆ ಜನರಿಗೆ ಮಾಡತಕ್ಕ ಉಪದೇಶದಬಗ್ಗೆ ಎಷ್ಟರಮಟ್ಟಿಗೆ ಜವಾಬದಾರಿಯಾಗಿರುತ್ತೇನೆಂಬದರ ಅರಿವು ನನಗೆ ಸಂಪೂರ್ಣವಿರುವದು. ಆದರೆ ನನ್ನ ಬಾಂಧವರ ಹೀನಸ್ಥಿತಿಯನ್ನು ನಾನು ಪ್ರತ್ಯಕ್ಷನೋಡುವದರಿಂದ ನನಗೆ ಹಾಗೆ ಉಪದೇಶಮಾಡದೆ ಅನ್ಯ ಉಪಾಯವೇ ತೋರದಾಗಿದೆ. ಜನರಿಗೆ ತಲೆಪಟ್ಟಿಯನ್ನು ಕೊಡಬೇಡಿರೆಂದೂ, ಈ ಅಪರಾಧಕ್ಕೆ ಆಗುವ ಶಿಕ್ಷೆಯನ್ನು ಆನಂದ ದಿಂದ ಅನುಭವಿಸಲಿಕ್ಕೆ ಸಿದ್ಧರಾಗಿರೆಂದೂ ಕೆಲಸದಮೇಲಿರುವ ಮುದ್ದತಿಬಂದಿ ಕೂಲಿಕಾರರು ಸಂಪುಮಾಡಬೇಕೆಂದೂ ನಾನು ಹೇಳುವೆನು. ಆದರೆ ಈ ಅನರ್ಥವಾಗಗೊಡಬಾರದೆಂಬ ಪವಿತ್ರ ಉದ್ದೇಶದಿಂದ ಜನರಲ್ ಸ್ಮಟ್ಸ ಸಾಹೇಬರಿಗೆ ಈ ಎಲ್ಲ ಜುಲುಮೆಕಾಯಿದೆಗಳನ್ನು ಪರತು ತಕ್ಕೊಳ್ಳಬೇಕೆಂದು ನಾನು ವಿನಯಪೂರ್ವಕವಾಗಿ ಬೇಡಿಕೊಳ್ಳುತ್ತೇನೆ, ಎಂದು ಒಂದು ಪತ್ರವನ್ನು ಬರೆದರು. ಆದರೆ ಈ ಸಾಮೋಪಾಯದಿಂದ ಉಪಯೋಗವೇನೂ ಆಗಲಿಲ್ಲ

ಅದ್ದರಿಂದ **ಮಹಾತ್ಮರು** ಕಣಿಕಣಿಗೆಹೋಗಿ ತಲೆಪಟ್ಟಿಯನ್ನೂ . ಮತ್ತು ವಿವಾಹದ ಕಾಯಿದೆಯನ್ನೂ ಕಿತ್ತು ಹಾಕುವವರೆಗೆ ಕೆಲಸ ಬಿಡಲಿಕ್ಕೆ ಕೂಲಿಕಾರರಿಗೆ ಉಪದೇಶಮಾಡಹತ್ತಿದರು. ಅದರಿಂದ ಒಂದರಹಿಂದೊಂದು ಕಣಿಗಳು ಬಂದಾಗಿ ದೊಡ್ಡಗೊಂದಲವೇ ಎದ್ದಿತು. ಕಟ್ಟಕಡೆಗೆ ಕಣಿಗಳ ಒಡೆಯರೆಲ್ಲರೂ ಒಂದು ಸಭೆ ಕೂಡಿಸಿ ಅಲ್ಲಿಗೆ **ಮ. ಗಾಂಧಿ**ಯ

ವರನ್ನು ಬರಮಾಡಿಕೊಂಡರು. ಆಗ **ಮಹಾತ್ಮರು** ವಸ್ತು ಸ್ಥಿತಿ ತಿಳಿಸಿ ಹೇಳಲು, ಅದಕ್ಕೆ ಕಣಿಗಳ ಒಡೆಯರೆಲ್ಲರೂ ಒಪ್ಪಿ ತಲೆಪಟ್ಟಿ ಕಾಯಿದೆಯನ್ನು ಕಿತ್ತುಹಾಕಬೇಕೆಂದು ಎಲ್ಲರೂ ಸರ ಕಾರಕ್ಕೆ ವಿನಂತಿಮಾಡಿಕೊಂಡರು. ಆದರೆ ಆ ವಿನಯೋಕ್ತಿ ಯೂ ಉಪಯೋಗವಾಗಲಿಲ್ಲ.

ಕಡೆಗೆ **ಮಹಾತ್ಮರು** ಮಿ|| **ಆಲ್ಬರ್ಟ** ಮತ್ತು ಮಿ|| **ಕ್ಯಾಲೇನ್‌ಬ್ಯಾಕ** ಎಂಬ ಗೃಹಸ್ಥರ ಸಹಾಯದಿಂದ ಸತ್ಯಾ ಗ್ರಹಿಜನರ ನಾಯಕತ್ವವನ್ನು ಸ್ವೀಕರಿಸಿ ನ್ಯೂಕ್ಯಾಸಲ್ಲವನ್ನು ತಮ್ಮತಮ್ಮಮುಖ್ಯ ಪಟ್ಟಣವನ್ನಾಗಿ ಮಾಡಿಕೊಂಡರು. ಅಲ್ಲಿಗೆ ಪ್ರತಿನಿತ್ಯ ನೂರಾರು ಜನ ಕೂಲಿಕಾರರು ಕಣಿಯಿಂದ ಕೆಲಸ ಬಿಟ್ಟು ಬರುತ್ತಿದ್ದರು. ಅಲ್ಪಾವಧಿಯಲ್ಲಿ ಸುಮಾರು ಮೂರು ಸಾವಿರ ಪ್ರಚಂಡ ಜನಸಮೂಹವೇ ಆಯಿತು. ಇವರೆಲ್ಲರ ಉದರ ಪೋಷಣೆಯಬಗ್ಗೆ ಮಿ|| **ಕಾಲೆನ್ ಬ್ಯಾಕ್ ಸಾಹೇ ಬರು** ಅತ್ಯಂತ ಶ್ರಮಪಡುತ್ತಿದ್ದರು. **ಮಹಾತ್ಮರು** ಆ ಜನ ರಕೂಡ ಇದ್ದು ತಮ್ಮ ಸುಖ ದುಃಖಗಳನ್ನೂ ಮರೆತು ಅತ್ಯಂ ತ ಪ್ರೇಮದಿಂದ ಆ ಜನರ ಪರಾಮರಿಕೆಯನ್ನು ಮಾಡುತ್ತಿ ದ್ದದರಿಂದ ಅವರೆಲ್ಲರೂ ಆನಂದದಿಂದ ಇದ್ದರು. ಈ ಸಮ ಯದಲ್ಲಿ ಆಫ್ರಿಕೆಯೊಳಗಿನ ಹಿಂದೂ ವ್ಯಾಪಾರಿಗಳೂ, ಹಿಂ ದುಸ್ತಾನದೊಳಗಿನ ಜನರೂ ಆ ಸತ್ಯಾಗ್ರಹಿ ವೀರರರಿಗೆ ಹೇ ರಳವಾಗಿ ಧನ ಸಹಾಯ ಮಾಡಿದರು. ಇದಲ್ಲವೇ ಸ್ವದೇಶ ಬಂಧುಪ್ರೇಮವು.

ಹೀಗೆ **ಮಹಾತ್ಮರು** ಸತ್ಯಾಗ್ರಹಿ ಸೇನೆಯ ನಾಯ

ಕತ್ವವನ್ನು ವಹಿಸಿ ಟ್ರಾನ್ಸವಾಲಕ್ಕೆ ಹೋಗುತ್ತಿದ್ದರು. ಹಾದಿ ಯಲ್ಲಿಯೇ ಮೂರು ನಾಲ್ಕು ಸಾವಿರ ಸತ್ಯಾಗ್ರಹಿ ಜನರನ್ನು ಅವರ ಮುಂದಾಳುಗಳಾದ **ಮ. ಗಾಂಧಿ**ಯವರನ್ನೂ ಸರ ಕಾರದವರು ಪ್ರತಿಬಂಧಿಸಿ ಒಯ್ದರು. ತಲೆಪಟ್ಟಿಯನ್ನು ತ ಪ್ಪಿಸಿಕೊಳ್ಳುವದರ ಸಲುವಾಗಿ ಟ್ರಾನ್ಸವಾಲಕ್ಕೆ ಹೋಗುವ ಸರ್ವ ಹಿಂದೂ ಜನರನ್ನು ಹಿಡಿಯುತ್ತೇವೆಂದು ಸರಕಾರದ ವರು ಪ್ರಸಿದ್ಧ ಮಾಡಿದರು. ಆದ್ದರಿಂದ ಸತ್ಯಾಗ್ರಹಿ ಜನರು ತಾವು ಸೆರೆಯಾಗಬೇಕೆಂದು ಬೇಕಂತೇ ಅಲ್ಲಿಗೆ ಹೋಗು ತ್ತಿದ್ದರು. ಈ ಪ್ರಸಂಗದಲ್ಲಿ **ಮಹಾತ್ಮರಿಗೆ** ಮೂರು ತಿಂಗಳು ಕಠಿಣ ಶಿಕ್ಷೆಯಾಯಿತು–

"ಬಿಸಿ ಹತ್ತಿದ ಬಳಿಕ ಬೆಣ್ಣೆ ಕರಗುವದು" ಎಂಬ ಮಾತು ಸಳ್ಳಲ್ಲ ಯಾಕಂದರೆ ಆಫ್ರಿಕೆಯೊಳಗಿನ ನಮ್ಮ ಹಿಂದೂ ಬಾಂಧವರು ತೋರಿಸಿದ ಸ್ವಾರ್ಥತ್ಯಾಗದಿಂದಲೂ, ಮತ್ತು ಅಸಾಧಾರಣ ಒಕ್ಕಟಿನ ಪರಿಣಾಮದಿಂದಲೂ ಎಷ್ಟೋ ದಿವಸ ಅಲ್ಲಿಯ ಕಣಿಗಳೂ, ಮತ್ತು ಕಾರಖಾನೆಗಳೂ ಬಂದಾ ದವು. ಅದರಿಂದ ಅಲ್ಲಿಯ ವಸತಿಗಾರರಿಗೂ, ಮತ್ತು ಕಣಿ ಯಮಾಲಕರಿಗೂ ವಿಶೇಷ ಕಷ್ಟ ನಷ್ಟಗಳು ಸಂಭವಿಸಿದವು. ಕಡೆಗೆ ಅಲ್ಲಿಯ ಸರಕಾರದವರು (೧) ಮೂರು ಪೌಂಡಿನ ತಲೆ ಪಟ್ಟಿಯನ್ನು ಎತ್ತುವದು ಬಂದು ಮಾಡಿದರು. (೨) ವಿವಾ ಹದ ಸಂಬಂಧದ ಕಾಯುದೆಯನ್ನು ರದ್ದು ಮಾಡಿದರು. (೩) ಹಿಂದೂ ಜನರಿಗೆ ಆಫ್ರಿಕಕ್ಕೆ ಹೋಗಲಿಕ್ಕೆ ಪರವಾನಿಗೆಯನ್ನು ಕೊಟ್ಟರು. ಹೀಗೆ **ಮಹಾತ್ಮರ** ಸತ್ಯಾಗ್ರಹಿ ಚಳವಳಿಗೆ ಸಂ ಪೂರ್ಣ ಜಯವು ಪ್ರಾಪ್ತವಾಯಿತು.

# ಎರಡನೇ ಭಾಗ.

## ಮಹಾತ್ಮರ ಮಾತೃ ಭೂಮಿಯ ಸೇವೆ.

### ಸನ್ ೧೯೧೪-೧೯೨೦ ರವರೆಗೆ.



ಆಫ್ರಿಕೆಯೊಳಗಿನ ಹಿಂದೂ ಬಾಂಧವರ ಸಕಲ ದುಃಖಗಳನ್ನು ದೂರಮಾಡಿ ಅವರು ಆನಂದ ಸಾಗರದಲ್ಲಿ ಮುಳಗಿರುವದನ್ನು ನೋಡಿ **ಮಹಾತ್ಮರು** ಬಹು ಸಂತೋಷಪಟ್ಟರು. ಮತ್ತು ಇನ್ನು ಮೇಲೆ ಮಾತೃಭೂಮಿಯ ಸೇವೆಯನ್ನು ಮಾಡಲು ಹೊರಡಬೇಕೆಂದು ಸರ್ವಸಿದ್ಧತೆಯನ್ನು ಮಾಡಿದರು. ಹಿಂದುಸ್ಥಾನಕ್ಕೆ ಬರಲಿಕ್ಕೆ ಮಹಾತ್ಮರಿಗೆ ಆಫ್ರಿಕೆಯಲ್ಲಿ ಕೆಲಸವುಳಿಯಲಿಲ್ಲವೆಂತಲ್ಲ. ಆದರೆ ತಮ್ಮ ದುಃಖಗಳನ್ನು ಸರಕಾರದಿಂದ ನಿವಾರಣೆ ಮಾಡಿಕೊಳ್ಳಲಿಕ್ಕೆ ಸತ್ಯಾಗ್ರಹವೆಂಬ ರಾಮಬಾಣ ಉಪಾಯವನ್ನು ಅಲ್ಲಿಯ ತಮ್ಮ ಬಾಂಧವರಿಗೆ ಸುಪ್ರಯೋಗವಾಗಿ ಕಲಿಸಿದ್ದರಿಂದಲೂ, ಹಿಂದುಸ್ಥಾನಕ್ಕೆ ಈ ಪ್ರಯೋಗವನ್ನುತೋರಿಸಿ ಭಾರತ ಮಾತೆಯ ದಾಸ್ಯವೃತ್ತಿಯನ್ನು ದೂರ ಮಾಡುವಬಹು ದೊಡ್ಡಕಾರ್ಯವನ್ನು ಕೈಕೊಳ್ಳಬೇಕಾದ್ದರಿಂದಲೂ' ಮಾತೃ ಭೂಮಿಗೆ ಬರಲುದ್ಯುಕ್ತರಾದರು.

**ಮಹಾತ್ಮರು** ತಮ್ಮನ್ನಗಲುವರೆಂಬ ವಾರ್ತೆಯನ್ನು ಕೇಳಿ ಅಲ್ಲಿಯ ಹಿಂದೂ ಜನರಿಗೆ ಪರಮಾವಧಿ ದುಃಖವೆನಿ

ಸಿತು. ಯಾರು ತಮ್ಮ ಸಕಲಸುಖದುಃಖಗಳನ್ನು ದೂರ ಮಾಡಿ
ಆನಂದಾಂಬುಧಿಯಲ್ಲಿ ಮಗ್ನರಾಗುವಂತೆ ಮಾಡಿದ್ದರೋ?
ಯಾರು ಪರ ದೈವತವೆಂದು ಭಾವಿಸಲ್ಪಟ್ಟಿದ್ದರೊ? ಅಂಥವರ
ಅಗಲುವಿಕೆಗಾಗಿ ಅಲ್ಲಿ ಯಾರು ಶೋಕಗೊಳ್ಳುವದೇನಾಶ್ಚ
ರ್ಯ. ಅಲ್ಲಿಂದ ಹೊರಡುವಾಗ್ಗೆ ಈ ದಂಪತಿಗಳಿಗೆ ಅತ್ಯಾದರ
ಪೂರ್ವಕವಾದ ಸನ್ಮಾನಗಳಾದವು. ಹೀಗೆ ಬಹು ಮರ್ಯಾ
ದಿತರಾಗಿ **ಮಹಾತ್ಮರು** ಸನ್ ೧೯೧೫ ನೇ ಇಸ್ವಿಯ ಆರಂ
ಭಕ್ಕೆ ಮರಳಿ ಮಾತೃ ಭೂಮಿಗೆ ಬಂದರು.

**ಮಹಾತ್ಮರು** ಹಿಂದುಸ್ಥಾನಕ್ಕೆ ಬಂದಬಳಿಕ ಮೊದಲು
ಮೂರು ನಾಲ್ಕು ತಿಂಗಳವರೆಗೆ ಇಲ್ಲಿಯ ಪ್ರಸಿದ್ಧಸ್ಥಳಗಳನ್ನು
ನೋಡುತ್ತ ಅಲ್ಲಿಯ ಪ್ರಮುಖರಿಗೂ, ಮಿತ್ರರಿಗೂ ದರ್ಶನ
ಕೊಡುತ್ತ ಸಂಚರಿಸಿದರು. ಬಳಿಕ ಒತ್ತಟ್ಟಿಗೆ ಸ್ಥಿರವಾಗಿರಬೇ
ಕೆಂದು ಅಹಮುದಾಬಾದ ಶಹರವನ್ನು ಗೊತ್ತುಮಾಡಿಕೊಂ
ಡರು. ಅಲ್ಲಿ ಸಾಬರಮತಿ ನದಿಯ ತೀರದಲ್ಲಿ ದೇಶಸೇವಾ
ಶಿಕ್ಷಣದ ಪವಿತ್ರ ಹೇತುವಿನಿಂದ ಸತ್ಯಾಗ್ರಹವೆಂಬ ಆಶ್ರಮ
ವನ್ನು ಸ್ಥಾಪಿಸಿದರು. (೧೯೧೫)

ಆಶ್ರಮ ಸ್ಥಾಪನೆಯಾದನಂತರ ಬಹಳದಿವಸಗಳವ
ರೆಗೆ **ಮಹಾತ್ಮರು**ಸಾಮಾನ್ಯ ಜನರ ದೃಷ್ಟಿಯಿಂದ ಅಜ್ಞಾತ
ವಾಸದಲ್ಲಿದ್ದಂತೆಯೇ ಆಗಿತ್ತು. ಈ ಅವಧಿಯಲ್ಲಿ ಈ ಮಹ
ನೀಯರು(೧)ಗುರುವರ್ಯ ಗೋಖಲೆಯವರ ಸ್ಮಾರಕಕ್ಕೆವರ್ಗ
ಣಿಯನ್ನು ಕೂಡಿಸಿದರು. (೨) ಸನ್ ೧೯೦೭ ರಿಂದ ಉಂಟಾದ
ರಾಷ್ಟ್ರೀಯ ಸಭೆಯ ಭೇದವನ್ನು ಹೋಗಲಾಡಿಸಲಿಕ್ಕೆ ಬಹು

ಪ್ರಯತ್ನ ಪಟ್ಟರು. (೩) ಅಹಮ್ಮದಾಬಾದದೊಳಗಿನ **ಹೆಸ** ರಿಗೆ ಮಾತ್ರ ಜೀವಂತರಾಗಿದ್ದ ಗುಜರಾಥ ಸಭೆಯ ಅಧ್ಯ ಕ್ಷಪದವನ್ನು ಸ್ವೀಕರಿಸಿ ಅದನ್ನು ಊರ್ಜಿತ ಸ್ಥಿತಿಗೆ ತಂದರು. (೪) ನಾನಾ ಫಂಡಗಳ ಹಾಗು ಮತಗಳ ರಾಜಕೀಯ ಹಾ ಗು ಧಾರ್ಮಿಕ ಸಭೆಗಳಿಗೆ ಹೋಗಿ ಪರಿಣಾಮಕರವಾದ ವ್ಯಾ ಖ್ಯಾನವನ್ನು ಕೊಡುತ್ತಿದ್ದರು. (೫) ಕೆಲವು ಮಾಸಿಕ ಪುಸ್ತ ಕಗಳಲ್ಲಿ ತಮ್ಮಲೇಖಗಳನ್ನು ಕೊಡುತ್ತಿದ್ದರು. ಈ ಸಂಣ ಪುಟ್ಟ ಕೃತಿಗಳಿಂದ **ಮಹಾತ್ಮರು** ತಮ್ಮ ಅಸ್ತಿತ್ವವನ್ನು ಎಲ್ಲರಿಗೆ ತಿಳಿಸುತ್ತಿದ್ದರಲ್ಲದೆ, ಇವರ ದರ್ಶನವು ಜನರಿಗೆ ಮಿಂಚಿ ನಂತೆ ಕ್ಷಣಮಾತ್ರವೇ ಆಗಿತ್ತು. ಆಶ್ರಮವೇ ಅಗ ಅವರ ನಿಜವಾದ ಕರ್ಮಕ್ಷೇತ್ರವಾಗಿತ್ತು

## ಆಶ್ರಮದಲ್ಲಿದ್ದಾಗ ಮಹಾತ್ಮರ ಮಹತ್ವದ ದಿನಚರ್ಯ.

ಆಶ್ರಮವನ್ನು ಸ್ಥಾಪಿಸಿದಾಗ್ಯೂ **ಗಾಂಧಿಯವರೇನೂ** ಮಹಂತರಾಗಿ ಕೂಡವಿಲ್ಲ. ಮತ್ತು ಶಿಷ್ಯರಿಗೆ ತಮ್ಮ ಪಾದ ಪೂಜೆಗೆ ಹಚ್ಚಲಿಲ್ಲ. ಅಥವಾ ಆಸನವನ್ನು ಹಾಕಿಕೊಂಡು ಪ್ರಾಣಾಯಾಮವನ್ನು ಮಾಡುತ್ತಲೂ ಕೂಡ್ರಲಿಲ್ಲ. ಆದರೆ ಅವರ ಅನುಕರಣೀಯದಿನಚರ್ಯೆಯು ಬೇರೆಯಾಗಿರುವವು ಅವು ಯಾವವೆಂದರೆ-

(೧) ಬೆಳಗಿನ ನಾಲ್ಕು ಬಡಿಯುತ್ತಲೇ ಸರ್ವರಿಗಿಂತಲೂ ತುಸು ಬೇಗ ಎದ್ದು ಒಂದು ಒಂದೂವರಿ ತಾಸಿನ ವರೆಗೆ

ಆಶ್ರಮಕ್ಕೆ ಬೇಕಾಗುವಷ್ಟು ಧಾನ್ಯವನ್ನೂ, ವಿದ್ಯಾರ್ಥಿಗಳನ್ನೂ ಕೂಡಿಕೊಂಡು ಬೀಸುತ್ತಿದ್ದರು. (೨) ಆರು ಬಡಿಯುತ್ತಲೇ ತಣ್ಣೀರಿನಿಂದ ಸ್ನಾನಮಾಡಿ ಪ್ರಾರ್ಥನೆಯನ್ನು ತೀರಿಸಿಕೊಂಡು ಬಾಲಕರಿಗೆ ಅಲ್ಪಾಹಾರವನ್ನು ಕೊಡುತ್ತಿದ್ದರು ಬಳಿಕ ದೂರಿನ ಬಾವಿಯಿಂದ ಸ್ವತಃ ನೀರು ತರಲಿಕ್ಕೆ ಹೋಗುತ್ತಿದ್ದರು. (೩) ಎಂಟು ಬಡಿಯು ಪಸುಪಾರಕ್ಕೆ ಅಡಿಗೆ ಮನಿಯಲ್ಲಿ ಅಡಚನಿಯಾದರೆ ಅಲ್ಲಿಗೆ ಹೋಗಿ ಪಲ್ಲೆ ಕಾಯಿಗಳನ್ನು ಹೆಚ್ಚುತ್ತ ಇಲ್ಲವೆ ಬಕ್ಕರಿಯನ್ನು ಬೇಯಿಸುತ್ತಿದ್ದರು. ಅಡಿಗೆಯಾದ ಕೂಡಲೆ ಹತ್ತು ಘಂಟೆಯ ಸುಮಾರಕ್ಕೆಸಂಘವರಿಗೂ ದೊಡ್ಡವರಿಗೂ ಸ್ವತಃ ಊಟಕ್ಕೆಹಾಕಿ ಬಳಿಕ ತಾವು ಊಟ ಮಾಡುತ್ತಿದ್ದರು.

(೪) ಊಟವಾದಕೂಡಲೆ ಕೆಲವು ವೇಳೆ ವಿಶ್ರಮಿಸಿಕೊಂಡು ನಂತರ ಕೈಮಗ್ಗದಮೇಲೆ ಕೂತು ನೇಯುತ್ತಿದ್ದರು. ಆಮೇಲೆ ರಾಮಾಯಣ ಮುಂತಾದ ಪುರಾಣ ಪುಣ್ಯ ಕಥೆಗಳನ್ನು ಜನರಿಗೆ ಬೋಧಿಸುವರು.

(೫) ಎರಡು ಘಂಟೆಗೆ ಶಾಲೆ ಶಾಲೆಗೆ ಹೋಗಿ ಕೋಮಲ ಅರ್ಭಕರೊಡನೆ ಆಡುತ್ತ ಅವರಿಗೆ ಸಂಸ್ಕೃತ, ಅಂಕಗಣಿತ ಮುಂತಾದ ಕಠಿಣ ವಿಷಯಗಳನ್ನು ಬಹು ಶುಲಭ ರೀತಿಯಿಂದ ಮನನವಾಗುವಂತೆ ಹೇಳಿಕೊಡುತ್ತಿದ್ದರು.

(೬) ಐದುಘಂಟೆಯ ಸುಮಾರಕ್ಕೆ ಬಾಲಗೋಪಾಲರನ್ನು ಸಂಗಡ ಕರಕೊಂಡು ಒಂದು ಒಂದೂವರೆ ಮೈಲಿನವರೆಗೆ ಅವರೊಡನೆ ನಗುತ್ತ ಕಲೆಯುತ್ತ ತಿರುಗಾಡಿ ಬರು

ತ್ತಿದ್ದರು. ನಂತರ ಎಲ್ಲರಿಗೂ ಊಟೋಪಚಾರವನ್ನು ಮಾಡಿಸುತ್ತಿದ್ದರು. ಆಮೇಲೆ ಯಾರಾದರೂ ಬಂದವರಿಗೆ ಭೆಟ್ಟಿಯನ್ನು ಕೊಟ್ಟು, ಹತ್ತುಘಂಟೆಯ ಸುಮಾರಕ್ಕೆ ಬರೇಚಾಪೆಯ ಮೇಲೆ ಮಲಗಿಕೊಳ್ಳುತ್ತಿದ್ದರು.

ಪ್ರಿಯವಾಚಕರೇ! ಕೇಳಿದಿರಾ **ಮಹಾತ್ಮರ** ದಿವಚರ್ಯೆಯನ್ನು. ಈ ಪ್ರಕಾರ ಇದ್ದ ಅವರ ಕಾರ್ಯಕ್ರಮವು ಆ ಮಹನೀಯರ ತಪಶ್ಚರ್ಯವೂ, ಮುಂದೆ ಮಾಡತಕ್ಕ ದೇಶಶೇವೆಯ ವ್ಯಾಪಾರದ ಭಂಡವಲವೂ ಆಗಿತ್ತಲ್ಲದೆ, ನಿಜವಾದ ದೇಶಸೇವೆಯನ್ನು ಮಾಡಿ ಉನ್ನತಿಯನ್ನು ಪಡೆಯಬೇಕೆಂಬ ದೇಶಭಕ್ತರು ತಮ್ಮ ವೃತ್ತಿಯನ್ನು ಎಷ್ಟು ನಮ್ರವಾಗಿಯೂ, ಎಷ್ಟು ವಿಧೇಯವಾಗಿಯೂ, ಮತ್ತು ಎಷ್ಟು ಸೇವಾತತ್ಪರರಾಗಿಯೂ ಇಡಬೇಕಾಗುತ್ತದೆಂಬದರ ಮಾರ್ಗದರ್ಶಕ ಶಿಕ್ಷಣವೇ ಆಗಿತ್ತು.

---

# ಚಂಪಾರಣ್ಯ ಪ್ರಕರಣ.

ಪಾಂಡವರು ಅಜ್ಞಾತವಾಸವನ್ನು ಮುಗಿಸಿಕೊಂಡು ಸ್ವರಾಜ್ಯ ಸಂಪಾದನೆಗಾಗಿ ಹೊರಟಂತೆ ನಮ್ಮ**ಮಹಾತ್ಮಾ ಜಿ**ಯವರು ತಮ್ಮ ಒಂದು ವರ್ಷದ ಅಜ್ಞಾತವಾಸವನ್ನು ಮುಗಿಸಿಕೊಂಡು ಸತ್ಯಾಗ್ರಹ ಚಳವಳಿಯನ್ನು ಪ್ರಚಾರ ಮಾಡಲು ಹೊರಟರು.

ಸನ್ನ ೧೯೧೬ ನೇ ಇಸವಿಯಲ್ಲಿ ಲಖನೌ ಪಟ್ಟಣದಲ್ಲಿ

ರಾಷ್ಟ್ರೀಯ ಮಹಾ ಸಭೆಯು ಕೂಡಿದಾಗ **ಮಹಾತ್ಮರು** ಹೋಗಿದ್ದರು. ಅಲ್ಲಿಗೆ ಬಹಾರ ಪ್ರಾಂತದೊಳಗಿನ ಚಂಪಾರಣ್ಯ ಜಿಲ್ಹೆಯ ಕೆಲವು ಪ್ರಮುಖ ಜನರೂ ಬಂದಿದ್ದರು. ಅವರು ಮ॥ **ಗಾಂಧಿಯ**ವರಿಗೆ ಚಂಪಾರಣ್ಯದಲ್ಲಿ ನಡೆದಿರುವ ಅನ್ಯಾಯವನ್ನು ಕುರಿತು ಸಭೆಯಲ್ಲಿ ಮಾತಾಡಲಿಕ್ಕೆ ವಿನಂತಿ ಮಾಡಿಕೊಂಡಿದ್ದರು ಆಗ ಅವರು ನಾನು ಸ್ವತಃ ಅಲ್ಲಿಯ ಸ್ಥಿತಿಗತಿಯನ್ನು ನಿರೀಕ್ಷಣೆ ಮಾಡದೆ ಆ ವಿಷಯದಲ್ಲಿ ಏನೂ ಮಾತಾಡಲಾರೆನೆಂದು ಸ್ಪಷ್ಟವಾಗಿ ಹೇಳಲು, ಆ ಜನರು ಅವರಿಗೆ ಚಂಪಾರಣ್ಯಕ್ಕೆ ಬರಲು ಆಗ್ರಹ ಪೂರ್ವಕವಾಗಿ ಆಮಂತ್ರಣ ಕೊಟ್ಟರು. ಅವರ ಆಮಂತ್ರಣಕ್ಕೆ ಮಾನ್ಯಮಾಡಿ **ಮಹಾತ್ಮರು** ೧೯೧೭ನೇ ಎಪ್ರೀಲ ತಿಂಗಳಲ್ಲಿ ಚಂಪಾರಣ್ಯದೊಳಗಿನ ಮೋತೀಹಾರವೆಂಬ ಪ್ರಸಿದ್ಧ ಊರಿಗೆಬಂದು ಒಬ್ಬ ಹೆಸರಾದ ವಕೀಲರ ಮನೆಯಲ್ಲಿ ಇಳಕೊಂಡರು.

**ಮಹಾತ್ಮರು** ಮೋತೀಹಾರಕ್ಕೆ ಬಂದ ಕೂಡಲೆ ತಮ್ಮ ತಿಂಬುಂಬುವದರಕಡೆಗೆ ಎಷ್ಟೂ ಲಕ್ಷ್ಯಗೊಡದೆ ಅಲ್ಲಿಯ ಪರಿಸಿಯನ್ನು ತಿಳಿದುಕೊಳ್ಳಲು ಎಲ್ಲಕಡೆಗೆ ಅಡ್ಡಾಡಿ ಕೂಲಿಕಾರರ ಸ್ಥಿತಿಗತಿಯನ್ನು ತಿಳಕೊಳ್ಳಹತ್ತಿದರು. ಇತ್ತ ಸರಕಾರದವರಾದರೂ ತಮ್ಮ ಕಾರ್ಯವನ್ನು ಮಾಡಲಿಕ್ಕೆ ಮರೆಯಲಿಲ್ಲ. ಮೋತೀಹಾರಕ್ಕೆ ಬಂದಕೂಡಲೆ ಆ ಸ್ಥಳವನ್ನು ಬಿಟ್ಟು ಹೋಗಲಿಕ್ಕೆ ಮಹಾತ್ಮರಿಗೆ ತಿಳಿಸಿದರು.

ಚಂಪಾರಣ್ಯಕ್ಕೆ ಬರುತ್ತಲೆ ಅಲ್ಲಿಂದ ಹೊರಹೊರಡುವದಕ್ಕೆ ಸರಕಾರದವರಿಂದ ಆದ ಅಪ್ಪಣೆಯಂತೆ ನಡೆಯ ಬೇಕೆಂ

ವರೆ ಅವರ ಜೀವದಸುತ್ತೇಬಂತು. ಅತ್ತ ಎಷ್ಟೋವರ್ಷಗಳಿಂ
ದ ಜುಲುಮೆಯಿಂದ ತುಳಿಯಲ್ಪಡುತ್ತಿರುವ ಸಾವಿರಾರು ದೀನ
ಹಾಗು ದುಃಖಿತರಾದ ಜನರು ತಮ್ಮನ್ನು ಅಸಹ್ಯತನಗಳಿಂದ
ಬಿಡಿಸಬೇಕೆಂದು ಹತಾಶಯರಾಗಿ ಕೂಗುತ್ತಿದ್ದರು. ಇತ್ತ
ಸರಕಾರದವರು ಹಿಂದಕ್ಕೆ ಜಗ್ಗುತ್ತಿದ್ದರು. ಈಮೇರೆಗೆ ದೊ
ಡ್ಡ ಪೇಚಿನಲ್ಲಿರುವಾಗ **ಮಹಾತ್ಮರು** ತಮ್ಮ ಹೆಸರಿಗೂ ಶೀಲ
ಕ್ಕೂ ತಕ್ಕಂಥ ಕಾರ್ಯವನ್ನೇ ಮಾಡಿದರು. ಶರಣುಬಂದ
ಅನಾಥರನ್ನು ರಕ್ಷಿಸುವದು, ಹಿಂದೂ ಜನರ ಧರ್ಮವೇ ಆಗಿದೆ.
ಈ ಧರ್ಮರಕ್ಷಣೆಗಾಗಿ ತಮ್ಮ ಜೀವವನ್ನು ಕೊಡಲಿಕ್ಕೆಸಹ
ಹಿಂದೂ ಜನರು ಹಿಂದುಮುಂದು ನೋಡದೆ ಇದ್ದಂಥ ಅನೇಕ
ದೃಷ್ಟಾಂತಗಳು ಪುರಾಣಾದಿಗಳಲ್ಲಿ ಕಂಡು ಬರುತ್ತವೆ. ಈ
ಸಂಗತಿಯ ನಿಜತ್ವವನ್ನು **ಮಹಾತ್ಮರು** ತಮ್ಮ ವರ್ತನದಿಂದ
ಆಗಿನ ಕಾಲಕ್ಕೆ ನಿದರ್ಶನಮಾಡಿ ತೋರಿಸಿದರು. ಕಡೆಗೆ
ಇವರು ಸರಕಾರದ ಅಪ್ಪಣೆಯನ್ನು ಅಮಾನ್ಯಮಾಡಿ ಆ ಅಪ
ರಾಧಕ್ಕಾಗಿ ಆಗುವ ಶಿಕ್ಷೆಯನ್ನು ಅನುಭವಿಸಲಿಕ್ಕೆ ಸಂತೋಷ
ದಿಂದ ಸಿದ್ಧರಾದರು. ಹೀಗೆ ತಾವೊಬ್ಬರೇ ಸಿದ್ಧರಾದರಂತಲ್ಲ
ತಮ್ಮನ್ನು ಹಿಡಿದೊಯ್ದರೆ ಚಂಪಾರಣ್ಯದೊಳಗಿನ ಕೈಕೊಂಡ
ಕಾರ್ಯವು ಮುಂದೆ ಹಾಗೇ ಸಾಗಬೇಕೆಂದು ಒಬ್ಬರನ್ನು ಹಿಡಿ
ದರೆ ಮತ್ತೊಬ್ಬರು ಆಸ್ಥಳಕ್ಕೆಬರುವಂತೆ ಬಹಾರ ಪ್ರಾಂತದೊಳ
ಗಿನ ದೊಡ್ಡದೊಡ್ಡ ಹೆಸರಾದ ವಕೀಲರನ್ನೂ, ಬ್ಯಾರಿಷ್ಟರನ್ನೂ
ಬೇರೆ ಎಷ್ಟೋ ಸುಪ್ರಸಿದ್ಧ ಜನರನ್ನೂ ತಯಾರು ಮಾಡಿಟ್ಟರು.
ಇಷ್ಟು ಅಲ್ಪಾವಧಿಯಲ್ಲಿ ಇಂಥ ಉತ್ತಮ ಸಿದ್ಧತೆಯನ್ನು

**ಮಹಾತ್ಮ**ರಿಂದು ಮಾಡಿದರಲ್ಲದೆ, ಇನ್ನೊಬ್ಬರಿಂದ ಆಗದು. ಸ್ವಪ್ನದಲ್ಲಿಸಹ ಸತ್ಯಾಗ್ರಹದ ವಿಷಯಕ್ಕೆ ವಿಚಾರಮಾಡದಂಥ ಅಲ್ಲಿಯ ಜನರು **ಮಹಾತ್ಮರ** ಸಲುವಾಗಿ ತಾವು ಬಲಿಯಾಗ ಲಿಕ್ಕೆಸಹ ಸಿದ್ಧರಾದರು. ಈ ಪ್ರಕಾರ ಸಂಪೂರ್ಣ ಸಿದ್ಧತೆ ಯಾದಮೇಲೆ **ಮಹಾತ್ಮರು** ಗೊತ್ತುಮಾಡಿದ ಹೊತ್ತಿಗೆ ಕೋರ್ಟಿಗೆ ಹೋದರು. ಇವರ ಸಂಗಡ ವಕೀಲರ ಹಿಂಡು ಇದ್ದು, ಹೊರಗೆ ಸಾವಿರಾರು ಜನರು ನೆರೆದಿದ್ದರು **ಮಹಾತ್ಮರು** ಕೋರ್ಟಿನಲ್ಲಿ ನ್ಯಾಯಾಧೀಶರಮುಂದೆ ಕೆಳಗೆ ಬರೆದ ತಮ್ಮ ಭಾಷಣವನ್ನು ಓದಿ ತೋರಿಸಿದರು. (ಅದರ ಸಾರಾಂಶವು ಸ್ವಲ್ಪದರಲ್ಲಿ ಕೊಡಲ್ಪಟ್ಟಿದೆ.)

ಕಾಯದೆಗೆ ಮಾನಕೊಡುವದು ಪ್ರತಿಯೊಬ್ಬ ನಾಗರಿಕನ ಕರ್ತವ್ಯವಿರುತ್ತದೆ. ಆದರೆ ಹಾಗೆ ಮಾಡಿದರೆ ಯಾರಸಲುವಾಗಿ ಇಲ್ಲಿಗೆ ಬಂದೆನೋ ಅವರ ವಿಷಯಕ್ಕೆ ನನ್ನ ಕರ್ತವ್ಯಬುದ್ಧಿಯನ್ನು ಘಾತಮಾಡಿದಂತೆ ಆಗುತ್ತಿತ್ತು ಪ್ರಜೆಗಳ ನಿಜವಾದ ದುಃಖವನ್ನು ಸರಕಾರಕ್ಕೆ ಶಾಂತರೀತಿಯಿಂದ ತಿಳಿಸುವ ಸೌಮ್ಯ ಪ್ರಸಂಗದಲ್ಲಿ ಅದಕ್ಕೆ ಅಡ್ಡಿ ಬರುವ ಕಾಯದೆಗೆ ನಾನು ಮಹತ್ವಕೊಡಲಾರೆನು. ಅಂಥ ಜುಲುಮೆಕಾಯದೆಯನ್ನು ಪಾಲಿಸುವದಕ್ಕಿಂತ ನನ್ನ ಸದಸದ್ವಿವೇಕದ ಆಜ್ಞೆಯನ್ನು ಪಾಲಿಸುವದೇ ನನಗೆ ಹೆಚ್ಚು ಮಹತ್ವವಾಗಿ ಕಾಣಿಸಿತೆಂಬು ತೋರಿಸುವದಕ್ಕಾಗಿಯೇ ಈ ಕೈಫಿಯತ್ತನ್ನು ಕೋರ್ಟಿನ ಸರೆಕ್ಕಿಟ್ಟಿರುವೆನಲ್ಲದೆ ನನಗೆ ಕಡಿಮೆತರದ ಅಥವಾ ಶಿಕ್ಷೆಯಾಗಬೇಕೆಂತಲ್ಲ.

**ಮಹಾತ್ಮರ** ಈ ಅಸಾಧಾರಣ ನಿರ್ಭರ ಭಾಷಣವನ್ನು ಕೇಳಿ ನ್ಯಾಯಾಧೀಶರ ಮುಖಮುದ್ರೆಯು ಆಶ್ಚರ್ಯಚಕಿತವಾದಂತೆ ಕಂಡುಬಂತು. **ಮಹಾತ್ಮರ** ಕಾಯದೇಶೀರ ಚಳವಳಿಯನ್ನು ಬಗ್ಗುಬಡಿಯುವದು ಸರಕಾರದವರಿಗೆ ಅಸಾಧ್ಯವಾಯಿತು. ಆದ್ದರಿಂದ ಅವರು **ಮಹಾತ್ಮರಿಗೆ** ಚಂಪಾರಣ್ಯ ಜಿಲ್ಲೆಯಲ್ಲಿ ಸಂಚರಿಸಬಾರದೆಂದು ಮಾಡಿದ ಪ್ರತಿಬಂಧವನ್ನು ತೆಗೆದುಹಾಕಿದರು. ಆದರೂ ಸಿ. ಆಯ್. ಡಿಯವರು ( ಗುಪ್ತ ಪೋಲೀಸರು ) ನಕ್ಷತ್ರಕನಂತೆ ಬೆನ್ನು ಹತ್ತೇ ಇದ್ದರು.

ಚಂಪಾರಣ್ಯ ಜಿಲ್ಹೆಯೊಳಗೆ ಕೆಲವು ನೀಲೀ ತೋಟಗಳಿರುವವು ಅವುಗಳ ಮಾಲಕರು ಯೋರೋಪಿಯನ್ ಗೃಹಸ್ಥರಿರುವರು. ಆ ತೋಟಗಳಲ್ಲಿ ಎಷ್ಟೋಸಾವಿರ ಹಿಂದೂ ಬಡ ಕೂಲಿಕಾರರು ಕೆಲಸಮಾಡುತ್ತಿದ್ದರು. ಅವರನ್ನು ಅಲ್ಲಿಯ ತೋಟಗಾರರು ಬಹಳ ಕೆಟ್ಟರೀತಿಯಿಂದಲೂ, ಜುಲುಮೆಯಿಂದಲೂ ನಡೆಸಿಕೊಳ್ಳುತ್ತಿದ್ದರು. ಆ ಬಡಪ್ರಾಣಿಗಳ ಕಸ್ಟನಿವಾರಣೆಗಾಗಿಯೇ ನಮ್ಮ **ಮಹಾತ್ಮಾಜಿ**ಯವರು ಅಲ್ಲಿಗೆ ಹೋಗಿದ್ದರು. **ಮಹಾತ್ಮರಿಗೆ** ಸಂಚರಿಸಲಿಕ್ಕೆ ಸ್ವತಂತ್ರತೆ ಸಿಕ್ಕಮೇಲೆ ಅವರು ಬಹಳೇ ಸೂಕ್ಷ್ಮರೀತಿಯಿಂದ ಅಲ್ಲಿಯ ಜನರ ಸ್ಥಿತಿಯನ್ನು ನಿರೀಕ್ಷಿಸಹತ್ತಿದರು. ಸಾವಿರಾರು ಜನರ ದುಃಖಗಳನ್ನು ಕೇಳಿಕೊಂಡರು. ಇವರ ಈ ಶೋಕದಲ್ಲಿ ಎಷ್ಟೋ ಹೃದಯದ್ರಾವಕ ಸಂಗತಿಗಳು ತಿಳಿಯಬಂದವು. ಅವುಗಳಲ್ಲಿ ಕೆಲವನ್ನುಮಾತ್ರ ಈ ಕೆಳಗೆ ಕೊಡಲ್ಪಟ್ಟದೆ.

(೧) ಹತ್ತುಹನ್ನೊಂದು ವರ್ಷಗಳ ಘುಕ್ಕಟ ಕೆಲಸ ಮಾಡುವ ಹುಡುಗರೂ ಹಾಗು ಗುಮಾಸ್ತರಿಂದ ಬಲಾತ್ಕಾರವಾಗಿ ಒಯ್ಯಲ್ಪಡುವ ಹೆಂಗಸರೂ ಬೆಳಗಿನ ಏಳುಘಂಟೆಯಿಂದ ಸಂಜೆಯುಏಳರವರೆಗೆ ಒಂದೇಸವನೆ ದುಡಿಯುಬೇಕಾಗುತ್ತಿತ್ತು. ನಡುವೆ ಊಟಕ್ಕೆಮಾತ್ರ ಒಂದುತಾಸು ವಿಶ್ರಾಂತಿ ಶಿಗುತ್ತಿತ್ತು.

(೨) ತೋಟಿಗರಿಗೆ ರೈತರು ಎರಡು ಆಣೆಗೆ ಒಂದು ಸೇರಿನಂತೆ ತುಪ್ಪವನ್ನು ಕೊಡಬೇಕಾಗುತ್ತಿತ್ತು. ಹಾಲು ಮೊಸರಿನ ಬೆಲೆಯನ್ನೇ ತಕ್ಕೊಳ್ಳುವಂತಿದ್ದಿಲ್ಲ.

(೩) ಬೆಲವಾನೆಂಬ ಊರಲ್ಲಿ ಪಂಡಿತ ರಾಜಕುಮಾರ ಶುಕ್ಲ ಎಂಬವರ ಬೆಳೆಯನ್ನು ಅಲ್ಲಿಯ ಮ್ಯಾನೇಜರರು ದನಗಳಿಗೆ ಮೇಯಿಸಿಬಿಟ್ಟರು ಮತ್ತು ಬತ್ತದ ಬೆಳೆಯನ್ನು ದ್ವೇಷದಿಂದ ಲೂಟಮಾಡಿಸಿದರು.

(೪) ತೋಟಿಗರು ರೈತರಿಂದ ತೆಗೆದುಕೊಳ್ಳುತ್ತಿದ್ದ ಭೂಮಿಗೆ ಒಂದು ಬಿಘೆಕ್ಕೆ ೧೫–೧೭ ರೂಪಾಯಿಗಳನ್ನು ಕೊಡುತ್ತಿದ್ದರು. ಆದರೆ ತಾವುಮಾತ್ರ ಬಿಘೆಕ್ಕೆ ೩೦೦ ರೂಪಾಯಿಗಳತನಕ ಸಂಪಾದಿಸುತ್ತಿದ್ದರು.

ಪ್ರಿಯವಾಚಕ ಮಹಾಶಯರೇ! ಕೇಳಿದಿರಾ ಚಂಪಾರಣ್ಯದೊಳಗಿನ ನಮ್ಮ ಹಿಂದೂ ಬಾಂಧವರಿಗಾಗುತ್ತಿದ್ದ ಸಂಕಟವನ್ನು ಅತ್ತೆಯೊಡೆದ ಗಡಿಗೆಗೆ ಬೆಲೆಯಿಲ್ಲವೆಂಬಂತೆ ಬಲಾಢ್ಯರು ಎಂಥ ತಪ್ಪನ್ನು ದೂಡಿ ಎಷ್ಟು ಅನ್ಯಾಯದಿಂದ ನಡೆಸಿಕೊಂಡರೂ ಚಿಂತೆಯಿಲ್ಲ. ನಮ್ಮಿಂದ ಸ್ವಲ್ಪತಪ್ಪಾದರೆ ಕಡ್ಡಿ

ಯನ್ನು ಗುಡ್ಡದಂತೆಮಾಡಿ ಪ್ರಾಣಾಂತ ಶಿಕ್ಷೆಯನ್ನು ಕೊಡ ಲಿಕ್ಕೆಸಹ ಹಿಂಮುಂದೆ ನೋಡುವದಿಲ್ಲ. ಬಲಾಚೇ ಪೃಥ್ವೀ ಉಪಾಯವಿಲ್ಲ.

**ಮಹಾತ್ಮರು** ಒಂದು ತಿಂಗಳತನಕ ಅವಿಶ್ರಾಂತ ಶ್ರಮ ಬಟ್ಟು ಅಲ್ಲಿಯ ಪರಿಸ್ಥಿತಿಯನ್ನು ಚನ್ನಾಗಿ ತಿಳಕೊಂಡು ಏಳು ಸಾವಿರಕ್ಕಿಂತ ಹೆಚ್ಚುಜನರ ಸಾಕ್ಷಿಯನ್ನುತಕ್ಕೊಂಡರು. ಮತ್ತು ಈಸಂಬಂಧದ ಒಂದು ರಿಪೋರ್ಟನ್ನು ಸರಕಾರಕ್ಕೆ ಕಳಿಸಿದರು.

**ಮಹಾತ್ಮರ** ಈ ಪ್ರಯತ್ನವು ಅಲ್ಲಿಯ ತೋಟದ ಮಾ ಲಕರಿಗೆ ಸಹನವಾಗದೆ ಸೇರಿಗೆ ಸವ್ವಾಸೇರು ಗಂಟುಬಿದ್ದಂತೆ, ಆಯಿತು. ಆ ಕಾಲಕ್ಕೆ ಬಿಹಾರದಲ್ಲಿ ಬಡ ಜನರು ಕಂಗಾ ಲಾಗಿ ಹೊಟ್ಟೆಗೋಸ್ಕರ ಕೆಲವು ಕಡೆಯಲ್ಲಿ ಲೂಟಿಯನ್ನು ಮಾಡಿದ್ದರು. ಮತ್ತು ಕೆಲವುಕಡೆಯಲ್ಲಿ ಹಿಂದೂ ಮುಸಲ್ಮಾ ನರಲ್ಲಿ ಬಡದಾಟ ವಾಗಿತ್ತು. "ಅರಿಷ್ಟಕ್ಕೆ ಶನೇಶ್ವರಗುರಿ" ಎಂ ಬಂತೆಇವಕ್ಕೆಲ್ಲ **ಗಾಂಧಿ**ಯವರೇ ಕಾರಣರೆಂದು ಅಲ್ಲಿಯಆಂಗ್ಲ ತೋಟಿಗರು ಹೂಲೀ ಎಬ್ಬಿಸಿದರು ಮತ್ತು **ಮಹಾತ್ಮರ** ಮೇಲೆ ಇಲ್ಲದ್ದೊಂದು ಆರೋಪವನ್ನು ಹೊರಿಸಿ ಒಂದು ಪತ್ರ ವನ್ನು ಪ್ರಸಿದ್ಧಮಾಡಿದರು.

ಈ ಪ್ರಸಂಗದಲ್ಲಿ ಸರಕಾರದವರು ಸಾರಾಸಾರ ವಿಚಾರ ಮಾಡಿ ರೈತರ ಕಷ್ಟನಿವಾರಣೆಗಾಗಿ ಆರು ಜನರದೊಂದು ಕಮಿಟಿಯನ್ನು ನೇಮಿಸಿದರು. ಆದರಲ್ಲಿ ರೈತರ ಪಕ್ಷದಿಂದ **ಗಾಂಧಿಯವರು** ಆರಿಸಲ್ಪಟ್ಟರು. ಕಮಿಟಿಯವರು ಅಲ್ಲಿ ಯ ತೋಟಗಾರರ ಹಾಗು ರೈತರ ಅಂಬೋಣವನ್ನು ನಿಷ್ಪಕ್ಷ

ಪಾತ ಬುದ್ಧಿಯಿಂದ ಕೇಳಿಕೊಂಡು ಯೋಗ್ಯ ರಿಪೋರ್ಟನ್ನು ಬಹು ತೀವ್ರವೇ ಹೊರಗೆಡವಿದರು ಸರಕಾರದವರು ಅದಕ್ಕೆ ಒಪ್ಪಿ ತಮ್ಮ ನಿರ್ಣಯವನ್ನು ಪ್ರಸಿದ್ಧಮಾಡಿದರು. ಒಟ್ಟಿಗೆ ಈ ಕಮಿಶನ್‌ನಿಂದ ರೈತರಿಗೆ ಆಗುತ್ತಿದ್ದ ಅನೇಕ ಕಷ್ಟನಷ್ಟಗಳ ನಿವಾರಣೆಯಾಯಿತೆಂದು ಹೇಳಲಿಕ್ಕೆ ಅಡ್ಡಿ ಇಲ್ಲ.

ನೂರಾರು ವರ್ಷಗಳಿಂದ ಪರಿಪರಿಯ ಸಂಕಟಗಳಿಂದ ತೊಳಲುತ್ತಿದ್ದ ಚಂಪಾರಣ್ಯದ ಪ್ರಜೆಗಳ ಕಷ್ಟ ನಿವಾರಣೆ ಮಾಡಿದ **ಮಹಾತ್ಮರನ್ನು** ಅಲ್ಲಿಯ ಜನರು ಸಾಕ್ಷಾತ್ **ದೇವರೆಂದು** ಭಾವಿಸಹತ್ತಿದರು. ಸಾವಿರಾರು ಜನರು ಹತ್ತೆಂಟು ಹರದಾರಿಗಳಮೇಲಿಂದ ಬಂದು ಪ್ರತಿನಿತ್ಯ ಈ ಮಹನೀಯರ ದರ್ಶನ ತೆಗೆದುಕೊಳ್ಳುತ್ತಿದ್ದರು. ಮತ್ತು ಇನ್ನೂ ಕೆಲವು ದಿವಸ ಇಲ್ಲಿಯೇ ಇದ್ದು ನಮ್ಮನ್ನು ಉದ್ಧಾರಮಾಡಬೇಕೆಂದು ಅಲ್ಲಿಯ ಜನರು ಭಯಭಕ್ತಿಯಿಂದ ಅಂಜಲಿ ಬದ್ಧರಾಗಿ ಬೇಡಿಕೊಂಡರು. **ಮಹಾತ್ಮರಾದರೂ** ಅವರ ವಿನಂತಿಗೆ ಮಾನ ಮಾಡಿ ಇನ್ನು ಆರು ತಿಂಗಳವರೆಗೆ ಇರುವದು ನಿಶ್ಚಯ ಮಾಡಿ ಕೆಳಗೆ ಕಾಣಿಸಿದ ದೇಶೋದ್ಧಾರ ಕಾರ್ಯಗಳಿಗೆ ಪ್ರಾರಂಭ ಮಾಡಿದರು,

(೧) ದೇಶೋದ್ಧಾರಕ್ಕೆ ರಾಷ್ಟ್ರೀಯ ಶಿಕ್ಷಣವೇ ತಾರುಣೋಪಾಯವೆಂದು ಮೂರು ಹುಡುಗರ ಹಾಗು ಒಂದು ದಿನಾಂತುಗಿಯ ಹೀಗೆ ನಾಲ್ಕು ಶಾಖೆಗಳನ್ನು ಸ್ಥಾಪಿಸಿದರು.

ವನ್ನು (೨) ದೇಶಕಾರ್ಯವನ್ನು ನಡೆಸಲು ಗುಜರಾಥಿ ಹಾ ಎಂಥ ಮಹಾರಾಷ್ಟ್ರ ಸ್ವಯಂಸೇವಕ ಸಂಘವನ್ನು ಸ್ಥಾಪಿಸಿದರು.

ಡ

(೩) **ಮಹಾತ್ಮರು** ಸ್ವಯಂಸೇವಕರೊಡನೆ ಊರೂರಿಗೆ ಹೋಗಿ ಜನರಿಗೆ ಸ್ವಚ್ಛತೆಯನ್ನಿಡುವಬಗ್ಗೆ ಉಪದೇಶ ಮಾಡಹತ್ತಿದರು. ಮತ್ತು ಅಲ್ಲಿಯ ಭಾವಿಗಳಲ್ಲಿ ಬಹಳೇ ಹೊಲಸಾಗಿದ್ದ ಮಲಿತ ನೀರನ್ನು ಸ್ವಯಂಸೇವಕರೊಡನೆ ಸ್ವತಃ ತೆಗೆದುಹಾಕಿ ಜನರಿಗೆ ಉದಾಹರಣೆಯನ್ನು ಹಾಕಿ ಕೊಡಹತ್ತಿದರು.

(೪) **ಮಹಾತ್ಮರು** ರೋಗಿಗಳಿಗೆ ರೊಕ್ಕವಿಲ್ಲದೆ ಔಷಧೋಪಚಾರ ನೆಡೆಸುವ ವ್ಯವಸ್ಥೆಯನ್ನು ಮಾಡಿದರು.

ಈ ಪ್ರಕಾರ **ಮಹಾತ್ಮಾಜಿ**ಯವರು ಅಲ್ಲಿ ಎಲ್ಲ ಪ್ರಕಾರದಿಂದಲೂ ಜನರಿಗೆ ಸಹಾಯಮಾಡುವ ಛತ್ರವನ್ನೇ ಉಂಟುಮಾಡಿದರೆಂದು ಹೇಳಿದರೆ ಅತಿಶಯೋಕ್ತಿಯಾಗಲಾರದು. ಚಂಪಾರಣ್ಯದೊಳಗಿನ ಕೆಲಸದಲ್ಲಿ ಮಹಾತ್ಮರು ಮಗ್ನವಾಗಿರುವಾಗ ಸಹ ದೇಶದೊಳಗಿನ ಬೇರೆಬೇರೆ ಚಳವಳಿಯಕಡೆಗೆ ಇವರ ಪೂರ್ಣ ಲಕ್ಷವಿತ್ತೆಂಬುವದನ್ನು ವಾಚಕರು ಮರೆಯಬಾರದು.

ಈ ಸಂಧಿಯಲ್ಲಿ ಹಿಂದೂ ಜನರ ಅಂಬೋಣವೇನೆಂಬುದನ್ನು ತಿಳುಕೊಳ್ಳುವದರಸಲುವಾಗಿ ಸ್ಟೇಟ ಸೆಕ್ರೆಟರಿಗಳಾದ ಮಿ. ಮಾಂಟೆಗ್ಯೂ ಸಾಹೇಬರು ಇಲ್ಲಿಗೆ ಬಂದರು. ಈ ಪ್ರಸಂಗದಲ್ಲಿ ಮಹಾತ್ಮರೇ ಮುಖ್ಯಭಾಗವನ್ನು ವಹಿಸಿ ಲಕ್ಷಾವಧಿ ಸಹಿಯುಳ್ಳ ಒಂದು ಅರ್ಜಿಯನ್ನು ತಯಾರಮಾಡಿಸಿ ಮಿ. ಮಾಂಟೆಗ್ಯೂ ಸಾಹೇಬರ ಕಡೆಗೆ ಕಳಿಸಿದರು. **ಮಹಾತ್ಮರು**

ಈ ಅರ್ಜಿಯಲ್ಲಿ ಇನ್ನು ಸ್ವರಾಜ್ಯ ಸಿಗದಹೊರತು ಹಿಂದುಸ್ಥಾನದಲ್ಲಿ ಶಾಂತತೆ ಉಳಿಯುವದು ಅಶಕ್ಯವೆಂದು ತಮ್ಮ ನಿರ್ಣಯವನ್ನು ಸ್ಪಷ್ಟವಾಗಿ ಕಾಣಿಸಿಬಿಟ್ಟಿದ್ದಾರೆ.

ಮಹಾತ್ಮರು ಆರುತಿಂಗಳತನಕ ಚಂಪಾರಣ್ಯ ಜಿಲ್ಹೆಯೊಳಗೆ ಸ್ಥಿರವಾಗಿ ಇದ್ದು ಅಲ್ಲಿಯ ಜನರ ಸಂಕಟನಿವಾರಣೆಯನ್ನುಮಾಡಿ ಗುಜರಾಥಕ್ಕೆ ಬರಬೇಕೆನ್ನುವಷ್ಟರಲ್ಲಿ ಅವರ ಪಾಲಿಗೆ ಖೇಡಾ ಪ್ರಕರಣ ವೊಂದು ಉಪಸ್ಥಿತವಾಗಿ ಕೂತಿತ್ತು. ಅಯ್ಯೋ, ಪಾಪ ಮಹಾತ್ಮರಿಗೆ ಸ್ವಲ್ಪವಾದರೂ ವಿಶ್ರಾಂತಿ ಬೇಡವೇ! ವಿಶ್ರಾಂತಿ ಯಾತರದು? ಲೋಕೋದ್ಧಾರಕ್ಕಾಗಿ ಅವತರಿಸಿದ ಮಹಾಪುರುಷರಿಗೆ ವಿಶ್ರಾಂತಿ ಶಿಗುವಬಗೆಹೇಗೆ?

ಸನ್ ೧೯೧೭ ನೇ ಇಸ್ವಿಯಲ್ಲಿ ಉತ್ತರದೇಶದಲ್ಲಿ ಅತಿವೃಷ್ಟಿಯಾಗಿ ಎಷ್ಟೋಕಡೆಯ ಬೆಳೆಗಳು ಸಂಪೂರ್ಣ ನಾಶವಾಗಿ ಹೋದವು ಆದರಂತೆ ಖೇಡಾ ಜಿಲ್ಹೆಯಲ್ಲಿಯೂ ಆಯಿತು. ಆದ್ದರಿಂದ ಅಲ್ಲಿಯ ಬಡ ರೈತರಿಗೆ ಸರಕಾರದ ತೆರಿಗೆಯನ್ನು ಕೊಡುವದು ಬಹು ಜಡವೆನಿಸಿತು. ಅಶನಕ್ಕೆ ವರ್ಜವಾದ ಮೇಲೆ ತೆರಿಗೆ ಯಲ್ಲಿಯದು ಹೀಗಿದ್ದರೂ ಸರಕಾರದವರೂ ಚೌಥಾಯಿದಂಡ ವಸ್ತುಒಡವೆಗಳ ಜಪ್ತಿಮುಂತಾದ ಕೃತಿಗಳಿಂದ ಕಂದಾಯುವನ್ನು ಎತ್ತಲಿಕ್ಕೆ ಆರಂಭಮಾಡಿದರು. ಇಂಥ ಪ್ರಸಂಗವನ್ನು ಸುಮ್ಮನೆ ನೋಡುತ್ತ ಕೂಡ್ರುವದು ಮಹಾತ್ಮರ ಕಡೆಯಿಂದ ಆದೀತೇ? ಕೂಡಲೆ ಅವರು ಈ ಪ್ರಕರಣದಲ್ಲಿ ಕೈ ಹಾಕಿ ನಾಲ್ಕು ಆಣೆಗಿಂತ ಕಡಿಮೆ ಬೆಳೆಬಂದಲ್ಲಿ ಸರಕಾರಕ್ಕೆ ಕಂದಾಯ ಕೊಡುವ ಕಾರಣವಿಲ್ಲ ಎಂಬ ಸರಕಾರದ ಕಾಯಿ

ಮೆಯನ್ನು ಪ್ರಕಟಮಾಡುವ ಒಂದು ಪತ್ರಿಕೆಯನ್ನು ಮಹಾತ್ಮರು ಗುಜರಾಥ ಸಭೆಯಿಂದ ಪ್ರಸಿದ್ಧಮಾಡಿದರು. ಇಷ್ಟು ಮಹಾತ್ಮರ ಬೆಂಬಲಸಿಕ್ಕಬಳಿಕ ಕೇಳುವದೇನದೆ ಅಲ್ಲಿಯ ಜನರು ಸತ್ಯಾಗ್ರಹಿಗಳಾಗಲಿಕ್ಕೆ ಪ್ರಾರಂಭ ಮಾಡಿದರು. ಜನರ ಆಸತ್ಯಾಗ್ರಹದ ಸಿದ್ಧತೆಯನ್ನು ಕಂಡು ಸರಕಾರದವರು ಶಾಂತವೃತ್ತಿಯನ್ನು ತಾಳಿ ಆಸಾರೆಯ ಕಂದಾಯವನ್ನು ಆಗ ಎತ್ತದೆ ಮುಂದೆ ಕಂತಬಂತೆ ತೆಗೆದುಕೊಳ್ಳಬೇಕೆಂದು ಗೊತ್ತುಮಾಡಿದ್ದರಿಂದ ಪ್ರಕರಣವು ಮುಗಿಯಿತು ಎಲ್ಲ ಮಹಾತ್ಮರ ಪ್ರವೇಶವೋ ಅಲ್ಲಿ ಪ್ರಜಾಪಕ್ಷಕ್ಕೆ ಅನುಕೂಲವಾಯಿತೆಂತಲೇ ತಿಳಿಯಬೇಕು. ಈ ಮಹಾಮಹಿಮರ ತಪೋಪ್ರಭಾವವೇ ಹಾಗಿರುವದು

# ಖೇಡಾ ಜಿಲ್ಲೆಯ ಪ್ರಕರಣ.



ಸನ್ ೧೯೧೯ನೇ ಇಸ್ವಿಯಲ್ಲಿ ಪಂಜಾಬದ ಅತ್ಯಾಚಾರ ಪ್ರಸಂಗ ಒದಗಿತು. ನಮ್ಮ ಜನರು ಮಾಡಿದ ಸ್ವಲ್ಪತಪ್ಪಿಗಾಗಿ ಅನೇಕ ಕಠಿಣತರವಾದ ಶಿಕ್ಷೆಗಳು ವಿಧಿಸಲ್ಪಟ್ಟವು. ನೂರಾರು ಪ್ರಮುಖರು ಸೆರೆಯಾಳಾದರು. ಸಾವಿರಾರು ಜನರು ಮೃತ್ಯುದೇವತೆಗೆ ತುತ್ತಾದರು. ಎಷ್ಟೋ ಸ್ತ್ರೀಯರ ಮಾನಭಂಗವೂ ಆಯಿತು ಹತ್ತು ಹನ್ನೆರಡು ವರ್ಷದ ಬಾಲಕರಿಗೆ ಫಟಕೀ ಶಿಕ್ಷೆಯು ಕೊಡಲ್ಪಟ್ಟಿತು ಆಗತಕ್ಕ ಕೃತಿಗಳೆಲ್ಲ ಆಗಿ ಹೋದವು; ಹಿಸೂ ಉಳಿಯಲಿಲ್ಲ. ಕಡೆಗೆ ಈ ಪ್ರಕರಣ ಯೋಗ್ಯ ವಿಚಾರಣೆಯಾಗಬೇಕೆಂದು ಸರಕಾರದವರಿಂದ ಹಂಟರ

ಕಮಿಟಿಯು ನೇಮಿಸಲ್ಪಟ್ಟಿತು. ಆ ಕಮಿಟಿಯಿಂದ ಪ್ರಜೆಗಳೇ ಪೂರ್ಣ ಅಪರಾಧಿಗಳೆಂದು ಸರಕಾರದವರು ಮಾಡಿದ್ದು ಯಥಾಯೋಗ್ಯವೆಂದು ನಿರ್ಣಯಿಸಲ್ಪಟ್ಟಿತು.

ಈ ನಿರ್ಣಯವನ್ನು ಕೇಳಿ ಮಹಾತ್ಮರಿಗೆ ಬಹಳ ಅಸಮಾಧಾನವೆನಿಸಿತು. ನಿರಪರಾಧಿ ಜನರಿಗೆ ಕೊಡಲ್ಪಟ್ಟಿದ್ದ ಶಿಕ್ಷೆಯ ಸಲುವಾಗಿ ಯೋಗ್ಯನಿರ್ಣಯವು ಸಿಗಬಹುದೆಂದು ಆಕಾಂಕ್ಷಿತರಾಗಿದ್ದರು. ಆದರೆ ಅವರ ಅಪೇಕ್ಷೆಯ ವಿರುದ್ಧನಿರ್ಣಯವು ಸಿಕ್ಕಿದ್ದರಿಂದ ಅವರು ಬಹು ಖೇದಗೊಂಡರು. ಇದೇ ವೇಳೆಯಲ್ಲಿ ಸರಕಾರದವರು ರೌಲೆಟ್ ಆಕ್ಟ ಮತ್ತು ಮಾರ್ಶಲ್‌ಲಾ ಎಂಬ ಹೊಸಕಾಯಿದೆಗಳನ್ನು ಪ್ರಚಾರದಲ್ಲಿ ತಂದರು. ಇದರಿಂದ ಹಿಂದೂಜನರಿಗೆ ಅನೇಕ ತರದ ಕಷ್ಟ ನಷ್ಟಗಳು ಒದಗುವ ಸಂಭವವಿತ್ತು. ಈ ಬಲವತ್ತರವಾದ ಕಾಯಿದೆಗಳನ್ನು ಭಂಗಪಡಿಸುವದಕ್ಕಾಗಿ ಮಹಾತ್ಮರು ಅಪ್ರತಿಮ ಸಾಹಸವನ್ನು ಮಾಡಿದರು. ಪ್ರತಿಯೊಂದು ಪ್ರಸಿದ್ಧ ಪಟ್ಟಣಗಳಲ್ಲಿ ಈ ಕಾಯಿದೆಗಳನ್ನು ಪೂರ್ಣನಿಷೇಧಿಸುವ ಪ್ರಸಿದ್ಧ ಪತ್ರಿಕೆಗಳನ್ನು ಹಂಚಿ ಜಾಹಿರ ಸಭೆಗಳಾಗುವಂತೆ ವ್ಯವಸ್ಥೆ ಮಾಡಿದರು.

ಹೀಗೆ ಪಂಜಾಬ ಪ್ರಕರಣದ ಅತ್ಯಾಚಾರದಿಂದಲೂ, ರೌಲೆಟ್ ಎಂಬ ಜುಲುಮೆ ಕಾಯಿದೆಯಿಂದಲೂ ನಮ್ಮ ಹಿಂದೂ ಬಾಂಧವರು ಅನೇಕ ಸಂಕಟಗಳನ್ನು ಅನುಭವಿಸುತ್ತಿರಲು **ಖಿಲಾಫತ್** ಪ್ರಕರಣ ವೊಂದು ಉಪಸ್ಥಿತವಾಯಿತು. ಇದರಿಂದ ಮುಸಲ್ಮಾನ ಬಾಂಧವರ ಧರ್ಮಕ್ಕೂ ಸ್ವಾತಂತ್ರ್ಯಕ್ಕೂ ಭಂಗವುಂಟಾಗುವ ಪ್ರಸಂಗವೊದಗಿತು. ಮುಸಲ್ಮಾನ

ರು ಧರ್ಮವೆಂದರೆ ತಮ್ಮ ಜೀವವನ್ನಾದರೂ ಕೊಟ್ಟಾರು ಪರಂತು ತಮ್ಮ ಧರ್ಮಕ್ಕೆ ತಿಲಮಾತ್ರವೂ ಕಲಂಕ ಹಚ್ಚಗೊಡುವದಿಲ್ಲವೆಂಬುದು ಇತಿಹಾಸ ಪ್ರಸಿದ್ಧವದೆ. ಅದರಂತೆ ಈಗ ತಮ್ಮ ಧರ್ಮಕ್ಕೆ ನಷ್ಟವುಂಟಾಗುವ ಪ್ರಸಂಗ ಒದಗಿದ್ದರಿಂದ ಮಹಾಕ್ಷೋಭಯುಕ್ತವಾದ ಚಳವಳಿಯನ್ನು ನಡಿಸಲು ಪ್ರಾರಂಭಮಾಡಿದರು. ಇದೇ ವೇಳೆಯಲ್ಲಿ **ಮೌ. ಶೌಕತಅಲ್ಲಿ ಮೌ. ಮಹಮ್ಮದಅಲ್ಲಿ** ಎಂಬ ರಾಷ್ಟ್ರ ಸೇವಾಧುರೀಣರು ನಮ್ಮ **ಮಹಾತ್ಮಾಜಿಯವರ** ಅನುಯಾಯಿಗಳಾಗಿ ಅವರ ಛಾಯಾನುವರ್ತಿಗಳಾಗಿ ನಡೆಯಲು ಪ್ರಾರಂಭಿಸಿದರು. ಅಲ್ಲಿಂದ ಕೇಳುವದೇನದೆ. ಭಂಗಾರಕ್ಕೆ ಕುಂದಣ ಕೂಡಿಸಿದಂತಾಗಿ **ಮಹಾತ್ಮರ ಸ್ವರಾಜ್ಯ** ಸಂಪಾದನಾಕಾರ್ಯಕ್ಕೆ ಮತ್ತಿಷ್ಟು ಕಳೆಯೇರಿತು.

**ಮಹಾತ್ಮರು** ದೇಶ ಸೇವಾತತ್ಪರರಾಗಿರಲು **ಶ್ರೀ ಲೋಕಮಾನ್ಯರ** ಅವತಾರ ಸಮಾಪ್ತ ವೇಳೆಯು ಬಂದಿತು. ಅವರು ಮುಂಬೈ ಪಟ್ಟಣದಲ್ಲಿ ದೇಹಾಲಸ್ಯದಿಂದ ಶಯ್ಯಾಗ್ರಸ್ಥರಾದರು. ಇದನ್ನು ಕೇಳಿದ ಕೂಡಲೆ **ಮಹಾತ್ಮರು** ಕಳವಳಗೊಂಡು ಮುಂಬೈಗೆ ಹೋಗಿ **ಲೋಕಮಾನ್ಯರ** ಬಳಿಯಲ್ಲಿ ಅಹೋರಾತ್ರಿ ಇದ್ದು ಅವರ ಉಪಚಾರವನ್ನು ಪರಿಪರಿಯಿಂದ ಮಾಡಿದರು. ಆದರೆ ಕಾಲವು ವಿಪರೀತವಾದ್ದರಿಂದ **ಲೋಕಮಾನ್ಯರು** ಪರಂಧಾಮಕ್ಕೆ ತೆರಳಿದರು. ಆಗ ಮಹಾತ್ಮರಿಗೆ ಅಪರಿಮಿತ ದುಃಖ ಉಂಟಾಯಿತು.

ಹಿಂದಕ್ಕೆ **ಪರುಶರಾಮದೇವರು** ತನ್ನ ಅವತಾರ

ಸಮಾಪ್ತಿ ವೇಳೆಯಲ್ಲಿ ತನ್ನ ಸತ್ವವನ್ನೆಲ್ಲಾ ಸಾಕ್ಷಾತ್ **ಶ್ರೀ ರಾಮಚಂದ್ರದೇವರಲ್ಲಿ** ಸಮರ್ಪಿಸಿ ಹೋದಂತೆ ಹೀಗೆ **ಶ್ರೀ ಲೋಕಮಾನ್ಯರು ಶ್ರೀ ಮಹಾತ್ಮಾಜಿಯವರಲ್ಲಿ** ತಮ್ಮ ಸತ್ವ ಸಮರ್ಪಣೆಮಾಡಿ **ಸ್ವರಾಜ್ಯ** ಕಾರ್ಯವು ನಿವಿಘ್ನ ದಲೇ ಸಂಪೂರ್ಣ ವಾಗಬೇಕೆಂದು ಹೇಳಿ ಸಾನಂದದಿಂದ ಸ್ವರ್ಗವಾಸಿಗಳಾದರು

**ಶ್ರೀಲೋಕಮಾನ್ಯರ** ಪೂರ್ಣಾನುಗ್ರಹಕ್ಕೆ ಪಾತ್ರರಾದ **ಮಹಾತ್ಮಾಜಿ**ಯವರು **ಸ್ವರಾಜ್ಯ** ಸಂಪಾದನೆಗೆ ಅಸಹಕಾರ ವೇ ಕಡೆಯ ಉಪಾಯವೆಂದು ತಿಳಿದು ವೀರಾಗ್ರಣಿಗಳಾದ **ಅಲ್ಲೀ ಬಂಧು**ಗಳನ್ನು ಕೂಡಿಕೊಂಡು ಅಸಹಕಾರ ತತ್ವವನು ಪ್ರಚಾರಗೊಳಿಸಲು ಭರತಖಂಡದ ಬಹುಭಾಗಗಳಲ್ಲಿ ಅಡ್ಡಾಡಿ ದರು. ಆಗ ಅವರಿಗೆ ಅಭೂತಪೂರ್ಣವಾದ ಮಾನ ಮರ್ಯಾ ದೆಗಳಾಗಿ ಲಕ್ಷೋಪಲಕ್ಷ ಜನರು ಅವರ ಅನುಯಾಯಿಗಳಾ ದರು. ಇದೇ ವೇಳೆಯಲ್ಲಿ ಅಂದರೆ ಸನ್ ೧೯೨೦ ನೇ ಇಸ್ವಿ ನವ್ಹಂಬರ ತಿಂಗಳಲ್ಲಿ **ಮಹಾತ್ಮರು ಮೌ. ಶೌಕತಅಲ್ಲಿ** ಮುಂತಾದ ಪ್ರಮುಖರೊಡನೆ **ಬೆಳಗಾಂವ, ಧಾರವಾಡ, ಹುಬ್ಬಳ್ಳಿ** ಮುಂತಾದ ಪಟ್ಟಣಗಳಲ್ಲಿ ಬಂದು ನಮ್ಮ **ಕರ್ನಾ ಟಕ**ವನ್ನು ಪವಿತ್ರವನ್ನಾಗಿ ಮಾಡಿದರು ಆಗ ಸಾವಿರಾರು ಜನರು ನೂರಾರು ಮೈಲುಗಳಮೇಲಿಂದ ಬಹು ಭಕ್ತಿಯಿಂದ ಬಂದು ಅವರ ದರ್ಶನವನ್ನು ತೆಗೆದುಕೊಂಡು ಅವರ ಸದ್ಬೋ ಧವನ್ನು ಕೇಳಿ ಧನ್ಯರಾದರು.

**ಮಹಾತ್ಮರು** "ಎಂಗಇಂಡಿಯಾ ಮತ್ತು ನವಜೀವನ

ವೆಂಬ ತಮ್ಮ ಸುಪ್ರಸಿದ್ಧ ಪವಿತ್ರಕರವಾದ ವರ್ತಮಾನ ಪತ್ರ ಗಳಿಂದಲೂ ಮತ್ತು ತಮ್ಮ ಅಧಿಕಾರಯುಕ್ತವಾಣಿಯಿಂದಲೂ ಅಸಹಕಾರದಬಗ್ಗೆ ಲೋಕಮತವನ್ನು ತಯಾರಮಾಡುತ್ತ ಪ್ರ ಜೆಗಳಲ್ಲಿ ನವೀನ ರಾಷ್ಟ್ರ ಜಾಗ್ರತೆಯನ್ನುಂಟುಮಾಡತೊಡಗಿ ದರು. ಹೀಗೆ ಮಹಾತ್ಮರು ಸರ್ವರಲ್ಲಿ **ಸ್ವದೇಶ** ಭಕ್ತಿಯನ್ನು ಹೆಚ್ಚಿಸುತ್ತ ಹಿಂದುಸ್ಥಾನದಲ್ಲೆಲ್ಲ ಸಂಚರಿಸಿ ೧೯೨೦ ನೇ ಇಸ್ವಿ ಯಲ್ಲಿ ಆದ ನಾಗಪೂರದ ಕಾಂಗ್ರೇಸ ಮಹಾ ಸಭೆಗೆ ಬಂದರು

**ಮಾತೃಭೂಮಿಯ ಸೇವೆ (ಭಾಗ ೨) ಸನ್ ೧೯೨೧-೨೨ ಮಾರ್ಚ ೯ನೇ ತಾರೀಖಿನವರೆಗೆ**



ಆವರ್ಷದ ಮಹಾಸಭೆಗೆ **ಶ್ರೀ. ವಿಜಯರಾಘವಾ ಚಾರ್ಯರು** ಪ್ರೆಸಿಡೆಂಟರಿದ್ದರು. ಆಸಭೆಗೆ **ದೇಶ ಭಕ್ತ ಲಾಲಾಜಿ, ಬ್ಯಾ. ದಾಸ, ಅಲ್ಲೀಬಂಧು, ಬ್ಯಾ. ಸತ್ಯ ಮೂರ್ತಿ** ಮುಂತಾದ ಎಲ್ಲ ಪ್ರಮುಖ ಶ್ರೇಷ್ಠರು **ಸ್ವಾಮಿ ಶ್ರದ್ಧಾನಂದಜಿ, ಸ್ವಾಮಿ ಶಂಕರಾಚಾರ್ಯ** ನಮ್ಮ **ಮಹಾಭಾಗವತರು,** ಮುಂತಾದ **ಸಾಧು ಸದ್ಗುರುಗಳೂ** ಬಂದಿದ್ದರಲ್ಲದೆ, ಕರ್ನಲ್ ವೆಜವುಡ ಮುಂತಾದ ಯುರೋಪಿ ಯನ್ ಸಭ್ಯಗೃಹಸ್ಥರೂ ಬಂದಿದ್ದರು. ಆದ್ದರಿಂದ ಆ ವರ್ಷದ ಮಹಾಸಭೆಯು ವಿಶೇಷ ಮಹತ್ವವೆನಿಸಿತು. ಇಂಥ ಮಹಾ ಸಭೆಯಲ್ಲಿ ತಾರಾ ಗಣದಲ್ಲಿ ಪ್ರಕಾಶಿಸುವ ಚಂದ್ರನಂತೆ ನಮ್ಮ **ಮಹಾತ್ಮಾಜಿಯವರು**ವಿರಾಜಮಾನರಾಗಿದ್ದರು. ಕಾರ್ಯಾ ರಂಭದಲ್ಲಿ ಅಸಹಕಾರಿತೆಯಬಗ್ಗೆ ವಾದವಿವಾದಗಳುಂಟಾದವು.

**ಬ್ಯಾ. ದಾಸ** ಮುಂತಾದ ಕಾಯದೆ ಪಂಡಿತ ಶ್ರೇಷ್ಠರೇ ಮೊ
ದಲಾದವು ಮೊದಲುಮೊದಲು ಅಸಹಕಾರದಬಗ್ಗೆ ವಿರೊ
ಧಿಗಳಾಗಿದ್ದರು. ಆದರೆ ನಮ್ಮ ಮಹಾತ್ಮರು ತಮ್ಮ ಅಸಾ
ಧಾರಣ ಬುದ್ಧಿಸಾಮರ್ಥ್ಯದಿಂದಲೂ ಮತ್ತು ವರ್ಚಸ್ಸಿನ ಪ್ರಭಾ
ವದಿಂದಲೂ ಪ್ರತಿಪಕ್ಷಗಳನ್ನು ನಿರುತ್ತರರನ್ನಾಗಿ ಮಾಡಿದರು.
ಕಡಗೆ ಸರ್ವಾನುಮತದಿಂದ ಅಸಹಕಾರದ ಠರಾವು ಪಾಸಾ
ಯಿತು.

ವಾಚಕಮಹಾಶಯರೇ! ಇದುವರೆಗೆ ಆಗುತ್ತಿದ್ದ ಕಾಂ
ಗ್ರೆಸ ಮಹಾಸಭೆಗಳಲ್ಲಿ ಠರಾವುಗಳು ಕಾಗದಲ್ಲಿ ಪಾಸಾಗಿ ಕ
ಡ್ರುತ್ತಿದ್ದವೇ ಹೊರ್ತು ಹೆಚ್ಚಿಗೆ ಅಮಲಿನಲ್ಲಿ ಬರುತ್ತಿದ್ದಿಲ್ಲ
ಆದರೆ ಈ ವರ್ಷದಿಂದ ೧೯೨೦ ಹಾಗೆ ಆಗದೆ ಆ ಠರಾವುಗಳ
ಎಷ್ಟರಮಟ್ಟಿಗೆ ಪರಿಣಾಮಕಾರಿಯಾದವೆಂದು ಈ ಕೆಳಗೆ ತಿ
ದಪ್ಪು ಕೊಡಲ್ಪಟ್ಟದೆ.

ಕಾಂಗ್ರೇಸ ಮಹಾಸಭೆಯ ಅಪ್ಪಣೆಯಾದಕೂಡಲೆ
ಅದನ್ನು ವೇದವಾಕ್ಯದಂತೆ ತಿಳಿದು **ಬ್ಯಾ. ದಾಸ** ಮುಂತಾ
ಮಹನೀಯರು ತಮ್ಮ ಧಂದೆಯನ್ನು ಬಿಟ್ಟು ಕೊಟ್ಟು ನಿರು
ಮಸ್ವಾರ್ಥತ್ಯಾಗಿಗಳಾಗಿ ದೇಶಕಾರ್ಯ ಪ್ರವರ್ತಕರಾದರ
ಹೀಗೆ ವಕೀಲಿ ಸರಕಾರದ ನೌಕರಿ ಮುಂತಾದವುಗಳನ್ನು
ಟ್ಟು ಕೊಟ್ಟು ನಿರಾಧಾರಿ ಜನರ ಉಪಜೀವನವು ಸಾಗಬೇಕೆ
ದೂ ಮತ್ತು ರಾಷ್ಟ್ರೀಯ ಶಾಲೆ ಮುಂತಾದ ಸಂಸ್ಥೆಗಳು ನ
ಯಬೇಕೆಂದೂ **ಲೋ. ಟಿಳಕ ಮೆಮೋರಿಯಲ್ ಫಂಡ**
ಎಂಬರೂಪದಿಂದ ಧನಸಂಗ್ರಹ ಕಾರ್ಯವು ಪ್ರಾರಂಭವಾ

ತು. ಈ ಪ್ರಸಂಗದಲ್ಲಿ ಮಹಾತ್ಮರು ೧೯೨೧ ನೇ ಜೂನ ೩
ಪ್ರೈರಒಳಗಾಗಿ ೧ ಕೋಟಿ ರೂಪಾಯಿಯನ್ನೂ ೧ ಕೋಟಿ
ಕಾಂಗ್ರೆಸ ಮೆಂಬರರನ್ನೂ ೨೦ ಲಕ್ಷ ರಾಟೆಗಳನ್ನೂ ಮಾಡಿಯೇ
ತೀರಬೇಕೆಂದು ಪ್ರತಿಜ್ಞೆ ತೊಟ್ಟರು. ಮತ್ತು ಆ ಅವಧಿಯಲ್ಲಿ
ಯೇ ತಮ್ಮ ಭೀಷ್ಮ ಪ್ರತಿಜ್ಞೆಯನ್ನು ಪೂರ್ಣಮಾಡಿಬಿಟ್ಟರು

ಈ ಪ್ರಕಾರ ಮಹಾತ್ಮರು ತಮ್ಮ ಪ್ರತಿಜ್ಞೆಯನ್ನು ಪೂ
ರ್ಣಮಾಡಿಕೊಂಡು ಮುಂದಿನ ರಾಷ್ಟ್ರಕಾರ್ಯದಸಲುವಾಗಿ
೧೯೨೧ನೇ ಆಗಸ್ಟತಿಂಗಳಲ್ಲಿ ದಿಲ್ಲಿಯಲ್ಲಿ ಸಭೆಕೂಡಿಸಿದರು. ಆ
ಸಭೆಯಲ್ಲಿ ಪರದೇಶಿ ವಸ್ತ್ರಗಳಿಗೆ ಸಂಪೂರ್ಣ ಬಹಿಷ್ಕಾರಹಾಕಿ
**ಶುದ್ಧಸ್ವದೇಶಿ** ವಸ್ತ್ರವನ್ನೇ ಸರ್ವರೂ ಉಪಯೋಗಿಸಲು ಪ್ರ
ಯತ್ನ ಮಾಡಬೇಕೆಂದು ನಿರ್ಣಯಿಸಲ್ಪಟ್ಟಿತು. ಅದರಂತೆ
ಮಹಾತ್ಮರು ಮುಂಬೈ ಮುಂತಾದ ಪಟ್ಟಣಗಳಲ್ಲಿ ವ್ಯಾಖ್ಯಾನ
ವನ್ನು ಕೊಟ್ಟರು ಅವರ ಸ್ಫೂರ್ತಿ ಹಾಗು ಪರಿಣಾಮಕಾರಕ
ಭಾಷಣವನ್ನು ಕೇಳಿ ಎಷ್ಟೋ ವ್ಯಾಪಾರಸ್ಥರು ಪರದೇಶೀ ವಸ್ತ್ರ
ಗಳನ್ನು ತರಿಸುವದಿಲ್ಲವೆಂದು ಪ್ರತಿಜ್ಞೆಮಾಡಿದರು. ಮತ್ತು
ಅಲ್ಲಲ್ಲಿಗೆ ಪರದೇಶೀ ವಸ್ತ್ರಗಳ ಹೋಳಿಯೂ ಆಯಿತು. ಹೀಗೆ
ಮಹಾತ್ಮರ ಹಾಗು ಅವರ ಅನುಯಾಯಿಗಳ ಅಸಾಧಾರಣ
ಪ್ರಯತ್ನದಿಂದ ಅಲ್ಪಾವಧಿಯಲ್ಲಿಯೇ ಬರತ ಖಂಡದ ಮೂರು
ಮನೆಹಳ್ಳಿಯಲ್ಲಿಸಹ **ರಾಟೆ** ಹಾಗು **ಖಾದಿ**ಯ ಮಯವಾಗಿ
ರುವದು; ತಮ್ಮೆಲ್ಲರ ನಿದರ್ಶನಕ್ಕೆ ಬಂದ ಮಾತಾಗಿದೆ.

|| ಶ್ರೀರಾಮ ||

# ಭರತಖಂಡದ ಬೇರೆಬೇರೆ ಪ್ರಾಂತಗಳ ಪ್ರವಾಸ.

ಕಾಂಗ್ರೇಸಿನಿಂದ ನಿಯಮಿಸಲ್ಪಟ್ಟ ವರ್ಕಿಂಗ ಕಮಿಟಿಯಿಂದ ಕಾಲಕಾಲಕ್ಕೆ ಸೂಚಾಯಿಸಲ್ಪಟ್ಟ ಕೆಲಸಗಳ ಅಮಲಬಜಾವಣಿಯು ಎಷ್ಟರಮಟ್ಟಿಗೆ ಆಗುತ್ತದೆಂಬದನ್ನು ಮಹಾತ್ಮರು ಬೇರೆಬೇರೆ ಪ್ರಾಂತಗಳಲ್ಲಿ ತಿರುಗಾಡಿ ಆಗಾಗ್ಗೆ ಸೂಕ್ಷ್ಮರೀತಿಯಿಂದ ನೋಡುತ್ತಿದ್ದರು. ಇದಕ್ಕಾಗಿ ಅಲ್ಲದೆ ಅವರು ಬೇರೆಕೆಲಸಗಳ ಉದ್ದಿಶ್ಯ ಮದ್ರಾಸಕ್ಕೆ ಹೋಗಿದ್ದರು. ಅಲ್ಲಿ ಅವರ ಸುಶ್ರಾವ್ಯವ್ಯಾಖ್ಯಾನಗಳು ನಡದೇ ಇದ್ದವು. ಈ ವೇಳೆಗೆಸರಿಯಾಗಿ ಅದೇ ಭಾಗಕ್ಕೆ ಸಮೀಪವಾಗಿದ್ದ ಮಲಬಾರದಲ್ಲಿ ಮಾಪಿಳ್ಳೆ ಜನರ ದಂಗೆ ಎದ್ದಿತು ದಂಗೆಯ ಕಾರಣಗಳೂ,ಅದರ ಪರಿಸ್ಥಿತಿ ಇವುಗಳ ವರ್ಣನೆಯೂ ಇಲ್ಲಿ ಅನವಶ್ಯವು. ಇರಲಿ. ಈ ಕಾಲಕ್ಕೆ ಮಹಾತ್ಮರು ಮದ್ರಾಸದಲ್ಲಿದ್ದರು. ಹಿಂಸೆಗೆ ಅತಿ ಭೀರುಗಳಾದ ಅವರು ತಮ್ಮ ಅನುಯಾಯಿಗಳೊಂದಿಗೆ ಮಲಬಾರಕ್ಕೆ ಶಾಂತತೆಗಾಗಿ ಹೊರಟರು. ಮದ್ರಾಸ ಸರಕಾರದವರು ಅವರಿಗೂ ಅವರ ಅನುಯಾಯಿಗಳಿಗೂ ಮಲಬಾರಕ್ಕೆ ಹೋಗ ಗೊಡಲಿಲ್ಲ. ಇಷ್ಟೇ ಅಲ್ಲ. ಮಹಾತ್ಮರ ಉಪದೇಶವೇ ಈದಂಗೆಯ ಮೂಲ ಕಾರಣವೆಂದು ತಿರುಗಿ ಅವರ ಮೇಲೆಯೇ ಆರೋಪವನ್ನಿಟ್ಟರು ಇದರಿಂದ ಮಹಾತ್ಮರು ನಿರುಪಾಯರಾಗಿ ತಿರುಗಿ ಬಂದರು.

ಮದ್ರಾಸದಿಂದ ಹೊರಟವರು ಮಹಾತ್ಮರು ನೆಟ್ಟಗೆ

ಮುಂಬಯಿಗೆ ಬಂದರು. ಇಷ್ಟರಲ್ಲಿ ಯುವರಾಜರ ಆಗಮನ
ದ ದಿವಸಗಳು ಸಮೀಪಿಸಿದವು. ಯುವರಾಜರು ನವ್ಹಂಬ
ರ ೧೭ ನೇ ತಾರೀಖಿಗೆ ಮುಂಬಯಿ ಬಂದರಕ್ಕೆ ಬರುವರೆಂಬ
ದಾಗಿ ಮೊದಲೇ ಸರಕಾರದಿಂದ ತಿಳಿಸಲ್ಪಟ್ಟಿತು ಆ ದಿವಸ
ವು ಭರತನಿವಾಸಿಗಳಿಗೆ ಸೂತಕದ ದಿವಸವೆಂದು ತಿಳಿದು ಹರ
ತಾಳ ಮಾಡಬೇಕೆಂದು ಕಾಂಗ್ರೇಸ ಕಮಿಟಿಯಿಂದ ನಿರ್ಣಯಿ
ಸಲ್ಪಟ್ಟಿತ್ತು.ಈ ಕಾಲಕ್ಕೆ ಮಹಾತ್ಮರು ಮುಂಬೈಯಿಯಲ್ಲಿಯೇ
ಇದ್ದರು ಅವರ ಅವಿಶ್ರಾಂತ ಪರಿ ಶ್ರಮದಿಂದ ಆ ದಿವಸವುಭರ
ತ ಖಂಡದಲ್ಲಿ ಎಲ್ಲೆಲ್ಲಿಯೂ ಹರತಾಳ ವ್ರತವು ಪಾಲಿಸಲ್ಪಟ್ಟಿ
ತು. ಇದರಂತೆ ಮುಂಬಯಿಯಲ್ಲಿಯೂ ಕಡುತರವಾದ ಹರ
ತಾಳವು ಬಿದ್ದಿತ್ತು. ಇದು ಅಲ್ಲಿಯ ಕೆಲವರಿಗೆ ಸಹನವಾಗದೆ ಇ
ದನ್ನು ಬಗ್ಗು ಬಡಿಯ ಬೇಕೆಂದು ಅವರು ದಂಗೆಯನ್ನೆಬ್ಬಿಸಿದ
ರು. ಈ ದಂಗೆಯಲ್ಲಿ ನಿರಪರಾಧಿಗಳೂ, ನಿಃಶಸ್ತ್ರರೂ ಆದಎ
ಷ್ಟೋ ಜನರು ಕೊಲ್ಲಲ್ಪಟ್ಟರು. ಈ ಅನಾಹುತಹಿಂಸೆಯನ್ನು
ನೋಡಿ ಮಹಾತ್ಮರಿಗೆ ತಡೆಯಲಾರದಷ್ಟು ದುಃಖವಾಯಿತು.
ದಂಗೆಯನ್ನು ಶಾಂತ ಮಾಡುವದಕ್ಕಾಗಿ ಅವರೂ ( ಮಹಾತ್ಮ
ರೂ ) ಅವರ ಅನುಯಾಯಿಗಳೂ ವಿಶ್ವ ಪ್ರಯತ್ನ ಮಾಡಿದರು
ಅಲ್ಲದೆ ಮಹಾತ್ಮರು ಯಾವತ್ತು ಜನರು ಒಂದಾಗಿ ಪರಸ್ಪರರ
ಲ್ಲಿ ದ್ವೇಷ ಭಾವವನ್ನಳಿದು ಶಾಂತರಾಗದ ಹೊರತು ಅಹಾರವ
ನ್ನೇ ತಕ್ಕೊಳ್ಳುವದಿಲ್ಲೆಂದು ಘೋರ ಪ್ರತಿಜ್ಞೆಯನ್ನು ಮಾಡಿದ
ರು. ಅವರ ಈ ಪ್ರತಿಜ್ಞೆಯು ಸ್ವಲ್ಪ ಕಾಲದಲ್ಲಿಯೇ ಇಡಿ ಮುಂ
ಬಾ ಪುರಿಯಲ್ಲಿ ಹಬ್ಬಿತು. ಇದನ್ನು ಕೇಳಿ, ತಿಳಿದ ಪ್ರ ತಿಯೊ

ಬ್ಬನು ತನ್ನಲ್ಲಿಯ ದ್ವೇಷ ಭಾವವನ್ನು ಹೊರದೂಡಿ ಬಿಟ್ಟನು. ಈ ಮೇರೆಗೆ ಅವರ ಉಪವಾಸ ವ್ರತವು ೫ ದಿವಸಗಳವರೆಗೆನಡೆ ಯಿತು ಆವ್ರತದ ಪ್ರಭಾವದಿಂದ ಯಾವತ್ತೂ ಜಾತಿಯವರೂ ಸಂಗಡದವರೂ ಪರಸ್ಪರರಲ್ಲಿಯ ಪ್ರಕ್ಷುಬ್ಧ ಸ್ಥಿತಿಯನ್ನು ಬಿಟ್ಟು ಶಾಂತರಾಗಿ ಬಂದು, ಮಹಾತ್ಮರಿಗೆ ಭೆಟ್ಟಿ ಯಾಗಿ, ತಮ್ಮತ ಪ್ಪುಗಳನ್ನು ಒಪ್ಪಿಕೊಂಡು ಇನ್ನು ಹೀಗೆ ಮಾಡುವದಿಲ್ಲೆಂದು ಹೇಳಿದರು. ನಂತರ ಮಹಾತ್ಮರು ತಮ್ಮ ಉಪವಾಸ ವ್ರತವ ನ್ನು ಮುಗಿಸಿ ಪಾರಣೆಯನ್ನು ಮಾಡಿದರು. ಇದರಿಂದ ಅವರ ಯೋಗ್ಯತೆಯು ಎಂಥದೆಂಬವನ್ನು ವಾಚಕರೇ ವಿಚಾರಿಸತಕ್ಕ ದ್ದು. ಈ ದಿವಸ ಮೊದಲ್ಗೊಂಡು ಅಂದರೆ ನವ್ಹಂಬರ ೧೭ ನೇ ತಾರೀಖಿನಿಂದ ಪ್ರತಿ ವಾರದಲ್ಲಿ ಸೋಮವಾರ ದಿವಸ ಮೌ ನ ವ್ರತವನ್ನಾಚರಿಸ ಹತ್ತಿದರು.

ಮುಂಬೈಯಿ ದಂಗೆಯು ಸಮಾಪ್ತಿಯ ನಂತರ ಮಹಾತ್ಮ ರು ದಿಶಂಬರದಲ್ಲಿ ನೆರೆಯತಕ್ಕ ಅಖಿಲ ಭಾರತೀಯ ರಾಷ್ಟ್ರೀ ಯ ಮಹಾ ಸಭೆಯ ತಯಾರಿಯ ನಿಮಿತ್ತ ಅಹಮ್ಮದಾಬಾ ದಕ್ಕೆ ಹೋಗ ಬೇಕಾಯಿತು ಈ ಪೂರ್ವದಲ್ಲಿಯೇ ಅವರಉ ಪದೇಶದಂತೆ ಅಖಿಲ ಭರತ ಖಂಡದಲ್ಲಿ ಎಲ್ಲಿಯೂ ಖಾದಿಯ ಪ್ರಸಾರವೂ ಪರದೇಶೀ ವಸ್ತ್ರಗಳ ಹೋಳಿಯೂ ಅತಿ ತೀವ್ರತರ ದಿಂದ ನಡೆದಿದ್ದವು ಮತ್ತು ವ್ಹಾಲಂಟಿಯರರನ್ನು [ ಸ್ವಯಂ ಸೇವಕ ] ತಯಾರಿಸುವ ಕೆಲಸವೂ ಒಳ್ಳೇ ಭರದಿಂದ ನಡೆದಿ ತ್ತು. ಈ ಕಾರ್ಯಗಳಿಗಾಗಿ ಬಂಗಾಲ, ಸಂಯುಕ್ತ ಪ್ರಾಂ ತ, ಪಂಜಾಬ, ಮುಂಬೈ, ಮದ್ರಾಸ, ಧಾರವಾಡ ಮುಂ

ತಾದ ಆಯಾ ಪ್ರಾಂತಗಳಲ್ಲಿಯ ಪುಢಾರಿಗಳು ಕೃತಕರ್ಮಿಗ
ಳಾಗಿ ಸರಕಾರದವರ ದಯಾಳಿಕೆಯ ದೋಷಕ್ಕೆ ಪಾತ್ರರಾಗಿಪ್ರ
ಸ್ತುತ ಪರಿಸ್ಥಿತಿಗೆ ತಪಶ್ಚರ್ಯಕ್ಕೆ ಅತಿ ಪುಣ್ಯ ಭೂಮಿಯೆನಿಸಿದ
ಬಂದಿವಾಸಕ್ಕೆ ಸ್ವಸಂತೋಷದಿಂದ ಹೋದರು. ಇಂಥ ಮಹಾ
ಮಹಿಮರಲ್ಲ **ಬ್ಯಾ. ದಾಸ ಪಂ. ಮೋತೀಲಾಲ ನೇಹರು
ಲಾಲಾಜಿ ರಾಜಗೋಪಾಳಾಚಾರ್ಯ** ಮೊದಲಾದವರು
ಇವರು ಸಾಮಾನ್ಯ ಪುರುಷರಲ್ಲ. ಯಾರು ತಿಂಗಳೊಂದಕ್ಕೆ
೪೦-೫೦ ಸಾವಿರ ರೂಪಾಯಿಗಳನ್ನು ಗಳಿಸುತ್ತಿದ್ದರೆ ಯಾರು
ರಾಜವಿಲಾಸಿಗಳು ಇಂಥವರು ತಮ್ಮ ಸ್ವಾರ್ಥಕ್ಕೆ ನೀರೆರೆದು
ಕೇವಲ ದೇಶ ಹಿತಕ್ಕಾಗಿ ಎಂಥ ಕಷ್ಟಗಳನ್ನಾದರೂ ಸಹಿಸುವ
ಷ್ಟು ಸಿದ್ಧ ಪುರುಷರಾದದ್ದು ಕೇವಲ ಮಹಾತ್ಮರ ದಿವ್ಯ ಉಪ
ದೇಶದಿಂದಲೇ ಅಲ್ಲವೇ? ಮಹಾತ್ಮರ ಉಪದೇಶವು ಸದಾಕಾ
ಲ ಮಹತ್ತರವಾದದ್ದಿರುತ್ತದೆಂಬ ಮಾತು ಈ ಪ್ರಸಂಗದಲ್ಲಿ
ಪ್ರತ್ಯಯಕ್ಕೆ ಬಾರದೆ ಇರದು ಇರಲಿ. ಈ ಕಾರ್ಯಗಳಿಗಾಗಿ
ಸಹಸ್ರಾರು ಜನರು ತುಂರಂಗ ಕಂಡರೂ; ಮಹತ್ಮಾಜಿಯ
ವರು ತಮಗೆ ಮಾತ್ರ ಅಂಥ ಪುಣ್ಯ ಭೂಮಿಯ ದರ್ಶನಲಾಭ
ವೂ, ವಾಸವೂ ಎಂದಿಗಾಗುವದೆಂದು ಯಾವಾಗಲೂ ಚಿಂತಿ
ಸುತ್ತಿದ್ದರು. ಅಹಹಾ! ಎಂಥ ಉಜ್ವಲವಾದದೇಶಭಕ್ತಿಯು!
ಎಂಥ ಅಚಲವಾದ ಧೈರ್ಯವು! ಅಂತೇ ಅವರಿಗೆ ಮಹಾ
ತ್ಮರೆಂದು ಹೇಳುವರು.

ದಿಶಂಬರ ೨೮-೨೯-೩೦ ಈ ಮೂರು ದಿವಸಗಳುರಾಷ್ಟ್ರೀ
ಯ ಮಹಾ ಸಭೆಯ ದಿವಸಗಳೆಂದು ನಿರ್ಣಯಿಸಲ್ಪಟ್ಟುಅದರ

ತಯಾರಿಗಾಗಿ ಜನ್ಮಭೂಮಿಯಂತೆ ಪ್ರೀತಿಸುವ ಅಹಮ್ಮದಾಬಾದಕ್ಕೆ ಮಹಾತ್ಮರು ೧೦—೧೫ ದಿವಸಗಳ ಪೂರ್ವದಲ್ಲಿಯೇ ಬಂದಿದ್ದರು ಅಲ್ಲಿ ಆ ಸಭೆಯ ತಯಾರಿಯನ್ನು ಮಾಡುವ ಸ್ವಯಂ ಸೇವಕ ಪಥಕವು ಮಹಾತ್ಮರ ಹೇಳಿಕೆಯಂತೆ ಸಾಬರಮತಿಯ ದಂಡೆಯಲ್ಲಿ ಮಂಟಪವನ್ನು ಹಾಕಿತ್ತು ಆ ಮಂಟಪವನ್ನು ನೋಡಿದ ಮಾತ್ರದಿಂದಲೇ ಎಂಥ ಸಹಕಾರಿಗಳಿದ್ದರೂ ಅ ಸಹಕಾರ ವ್ರತಕ್ಕೆ ಒಪ್ಪಿಗೆಯನ್ನೀಯುವ ಭಾವನೆಯು ಅವರಲ್ಲಿ ಉತ್ಪನ್ನವಾಗಲಿಕ್ಕೇ ಬೇಕು. ಹೀಗೆ ಅದನ್ನು ಸ್ವದೇಶಿ ವಸ್ತುಗಳಿಂದ ತಯಾರಿಸಿದ್ದರು. ಆ ಮಂಟಪದ ಪ್ರತಿಯೊಂದು ಭಾಗದಲ್ಲಿ ಎಲ್ಲಿ ನೋಡಿದರೂ ಖಾದಿಯು ಹೊರತು ಎರಡನೆಯದೇನೂ ಕಾಣಿಸುತ್ತಿರಲಿಲ್ಲ. ಈ ಕಾರಣದಿಂದ ಮಹಾತ್ಮರು ಅಹಮ್ಮದಾಬಾದದ ಆ ಭಾಗಕ್ಕೆ **ಖಾದಿಯ ನಗರ**ವೆಂದು ಹೆಸರಿಟ್ಟರು, ಈ ರೀತಿಯಿಂದ ತಯಾರಿಯಾಯಿತು; ದಿವಸಗಳೂ ಸಮಾಪಿಸಿದವು; ಸಭೆಗೆ ಬರತಕ್ಕ ಜನರೂ ಬರಹತ್ತಿದರು. ಅದರ ಯೋಗ್ಯ ವ್ಯವಸ್ಥೆಯು ಮಹಾತ್ಮರ ಹೇಳಿಕೆಯಂತೆ ಇಡಲ್ಪಟ್ಟಿತ್ತು. ಅಲ್ಲಿ ಅವರ ಉಪದೇಶದಿಂದ ಸ್ಪೃಶ್ಯತೆಯ ವಿಚಾರವು ಇರಲಿಲ್ಲ. ಪದ್ಧತಿಯಂತೆ ಸಭೆಯ ಕೆಲಸವೂ ನಡೆಯಿತು; ಈ ಸಭೆಯಲ್ಲಿ ನಾಗಪೂರದಲ್ಲಾದ ಸಭೆಯ ಯಾವತ್ತೂ ಠರಾವುಗಳು ಪಾಸಾದದ್ದಲ್ಲದೆ ಹೊಸದಾಗಿ **ಮಹಾತ್ಮ**ರಿಗೆ (ಡಿಕ್ಟೇಟರ) **ಸರ್ವಾಧಿಕಾರಿ**ಗಳನ್ನಾಗಿ ನಿಯಮಿಸಿ ಅವರು ಹೇಳಿದಂತೆ ಯಾವತ್ತರೂ ಕೇಳಬೇಕೆಂದು ಗೊತ್ತು ಮಾಡಿದರು. ಪರಸಂಧಾನ, ಕಾಂಗ್ರೇಸ ಕ್ರೀಡದಲ್ಲಿಯ

ಹೆಚ್ಚು ಕಡಿಮೆ ಈ ಎರಡು ವಿಷಯಗಳನ್ನು ಬಿಟ್ಟು ಬಾಕಿಯಾ ವತ್ತೂ ವಿಷಯಗಳಲ್ಲಿ ಮಹಾತ್ಮರು ಹೇಳಿದಂತೆ ನಡೆಯಲಿಕ್ಕೆ ಎಲ್ಲರೂ ಒಪ್ಪಿಗೆಯನ್ನು ಕೊಟ್ಟರು. ಆ ಹೊತ್ತಿನಿಂದ ಅವರು ಸರ್ವ ಹಿಂದುಸ್ಥಾನದ **ಸೇನಾಪತಿಗಳಾದರು.** ಮುಂದೆ ಅವರು ಕೆಲಸವನ್ನು ಅತ್ಯುತ್ತಮ ರೀತಿಯಿಂದ ಮಾಡಿದರೆಂಬದು ಮುಂದಿನ ಸಂಗತಿಗಳಿಂದ ವಾಚಕರಿಗೆ ಗೊತ್ತಾಗಬಹುದು. ಈ ಸಭೆಗೆ ಸುಪ್ರಸಿದ್ಧರೂ, ಬುದ್ಧಿವಂತರೂ ಆದ **ಪಂ| ಮದನ ಮೋಹನ ಮಾಲವೀಯವರೂ** ಬಂದಿದ್ದು ಅವರಿಗೂ ಮಹಾತ್ಮರಿಗೂ ಮಾತು ಕಥೆಗಳಾಗಿ ರಾಷ್ಟ್ರ ಸಭೆಯು ಧ್ಯೇಯಕ್ಕೆ ಅವರ ಒಪ್ಪಿಗೆ ಇರುವದೆಂಬದಾಗಿ ಅವರ ಸಹಾಯವಾಯಿತು. ಇದೊಂದು ಈ ಸಭೆಯಲ್ಲಿ ಮಹಾತ್ಮರಿಂದಲೇ ಒದಗಿದ ವಿಶೇಷವಾದ ಸಂಗತಿಯು.

ನಂತರ ಮಹಾತ್ಮರು ಮುಂಬೈ, ದಿಲ್ಲಿ, ಅಹಮದಾಬಾದ, ಅಜಮೀರ ಮೊದಲಾದ ಯಾವತ್ತೂ ಭಾಗಗಳಲ್ಲಿ ತಿರುಗಾಡಿ **ಸ್ವದೇಶಿ** ಸ್ವಯಂಸೇವಕ ಪಥಕಗಳನ್ನು ತಯಾರಿಸಿ ಮದ್ಯಪಾನ ಪ್ರತಿಬಂಧ ಮೊದಲಾದ ಕೆಲಸಗಳನ್ನೂ ಒಳ್ಳೇ ಜೋರಿನಿಂದ ಮಾಡಬೇಕಾಗಿ ಹೇಳಹತ್ತಿದರು. ಈ ಕಾರ್ಯಗಳನ್ನು ಆಯಾಭಾಗದಲ್ಲಿಯ ಸ್ತ್ರೀಪುರುಷರು ಭೇದಭಾವವಿಲ್ಲದೆ, ಒಳ್ಳೇ ತೀವ್ರದಿಂದ ಮಾಡಿದರು. ಈ ರೀತಿಯಿಂದ ಅಸಹಕಾರ ತತ್ವದ ಮೆಟ್ಟುಗಳಲ್ಲಿ ಕಡೆಯ ಮೆಟ್ಟಿನ ಹೊರತು ಯಾವತ್ತೂ ಮೆಟ್ಟುಗಳು ಸುವ್ಯವಸ್ಥೆಯಿಂದ ಅಮಲಿನಲ್ಲಿ ಬಂದವು.

ಇಷ್ಟು ತೀವ್ರದ ಚಳವಳಿಯು ನಡೆದರೂ ಸೌಕರಶಾಹಿ

ಯು ಬೇರೆ ಅವರ ಇಚ್ಛೆಯಂತೆ **ಸ್ವರಾಜ್ಯ** ಪಂಜಾಬದ ಅತ್ಯಾಚಾರ **ಖಿಲಾಫತ್** ಇವುಗಳಕಡೆಗೆ ಸ್ವಲ್ಪವೂ ಲಕ್ಷಗೊಡಲಿಲ್ಲ. ಇದನ್ನು ಕಂಡು ಮಹಾತ್ಮರು ಇನ್ನು ಅಸಹಕಾರದ ಸವಿನಯ ಕಾಯದೇಭಂಗದಹೊರತು ಅನ್ಯಮಾರ್ಗವಿಲ್ಲೆಂದು ತಿಳಿದು ಮುಂಬೈ ದಿಲ್ಲಿಗಳಲ್ಲಿ ಕೂಡಿದ ವರ್ಕಿಂಗ ಕಮಿಟಿಯಿಂದ ಇದಕ್ಕೆ ಅನುಮತಿಯನ್ನು ಪಡೆದು ಅದರ ಅಮಲ ಬಜಾವಣೆಗೆ ಯೋಗ್ಯ ಸ್ಥಳವನ್ನು ಹುಡುಕಹತ್ತಿದರು. ಎಲ್ಲಕಡೆಯಲ್ಲಿಯೂ ಒಮ್ಮೆಲೇ ಈ ನಿಯಮವನ್ನು ಪಾಲಿಸುವಷ್ಟು ಲೋಕತಯಾರಿ ಯಿರಲಿಲ್ಲ; ಯಾಕಂದರೆ ಅವರಲ್ಲಿದ್ದ ಪ್ರತಿಯೊಂದು ವ್ಯಕ್ತಿಯು ಪಾಲಿಸತಕ್ಕ ನಿಯಮಗಳು ಬಹಳ ಕಠಿಣ ವಿರುವವು. ಅವುಗಳಲ್ಲಿ ಪ್ರತಿಯೊಬ್ಬನಿಗೂ ನೂಲಲಿಕ್ಕೆ ಬರಬೇಕು. ಅವನು ಎಂಥಪ್ರಸಂಗದಲ್ಲಿಯೂ ಹಿಂಸೆಗೆ ಪ್ರವೃತ್ತನಾಗಬಾರದು. ಸ್ಪೃಶ್ಯಾಸ್ಪೃಶ್ಯತೆಯ ಭಾವನೆಯುಕೂಡ ಅವನಲ್ಲಿ ಇರಕೂಡದು. ಅವನು ಸದಾ ಸ್ವಾವಲಂಬಿಯಾಗಿರಬೇಕು. ಪ್ರಸಂಗವಶಾತ ತೋಪಿನಬಾಯಿಗೆ ನಿಲ್ಲುವಷ್ಟು ಧೈರ್ಯವುಳ್ಳವನಿರಬೇಕು. ಇವೇ ಮೊದಲಾಗಿ ಮುಖ್ಯ ನಿಯಮಗಳುಂಟು. ಇವುಗಳನ್ನು ಪಾಲಿಸತಕ್ಕ ಮನುಷ್ಯರೇ ಮೇಲಿನ ಸವಿನಯ ಕಾಯದೆಯ ಭಂಗವನ್ನು ಮಾಡಲಿಕ್ಕೆ ಯೋಗ್ಯರೆಂದು ಮಹಾತ್ಮರು ತಿಳಿದು ಅದರಂತೆ ಅವರು ತಮ್ಮ ಅನುಯಾಯಿಗಳಿಗೂ ತಿಳಿಸಿದರು. ಮಹಾತ್ಮರಿಂದ ಸವಿನಯ ಕಾಯದೆಯಭಂಗವನ್ನು ಮಾಡತಕ್ಕದ್ದೆಂಬ ಧ್ವನಿಯು ಹೊರಟ ಕೂಡಲೇ ನಾ ಮುಂದೆ ನೀ ಮುಂದೆ ಎಂದು ಅನೇಕ ಪ್ರಾಂತಗಳು ಮುಂದೊರೆದವು. ಅವುಗ

ಳಲ್ಲಿ ಕೆಲವು ಪ್ರಾಂತಗಳಲ್ಲಿಯಂತೂ ಸುಧಾರಿಗಳು ಅದನ್ನು ಅಮಲಿನಲ್ಲಿ ತಂದುಬಿಟ್ಟಿದ್ದರು. ಕೆಲಕೆಲವು ಕಡೆಯಲ್ಲಿ ಕರ ಕೊಡುವದೇ ಬಂದುಮಾಡಿ ಬಿಟ್ಟರು ಆದರೂ ಮಹಾತ್ಮಾ ಜಿಯವರು ಎಲ್ಲಕಡೆಗೂ ಒಮ್ಮೆಲೆ ಪ್ರಾರಂಭಿಸುವ ಮನಸ್ಸು ಮಾಡದೆ ಅತಿಶಯ ಉತ್ಸುಕತೆಯುಳ್ಳಂಥ ಮತ್ತು ಜನರ ತಯಾರಿಯುಳ್ಳಂಥ ಸುರತ ಜಿಲ್ಹೆಯೊಳಗಿನ ಬಾರಾಡೋಲಿ, ಆನಂದ ಈ ಎರಡು ತಾಲೂಕಗಳಲ್ಲಿ ಪ್ರಾರಂಭಿಸುವ ಆಲೋಚನೆಯನ್ನುಮಾಡಿ ಉಳಿದ ಪ್ರಾಂತದವರಿಗೆ ಅವುಗಳ ಅನುಭವನ್ನು ತಿಳಕೊಂಡನಂತರ ಪ್ರಾರಂಭಿಸಬೇಕೆಂದು ಹೇಳಿದರು. ಅದರಂತೆ ಉಳಿದ ಪ್ರಾಂತಗಳು ತಟಸ್ಥವೃತ್ತಿಯಲ್ಲಿರಬೇಕಾಯಿತು. ಆದರೆ ಮೇಲೆ ಹೇಳಿದಂತೆ ಬಾರಾಡೋಲಿ, ಆನಂದ ತಾಲೂಕಗಳಲ್ಲಿಮಾತ್ರ (ಸಿವ್ಹಿಲ್‌ಡಿಸ್‌ಓಬಿಡಿಯನ್ಸ) ಅಂದರೆ ಸವಿನಯಕಾಯದೆಭಂಗದ ತಯಾರಿಯು ಅತಿ ಭರದಿಂದ ನಡೆಯಿತು. ಜನರು ಅತ್ಯಂತ ಉತ್ಸುಕತೆಯುಳ್ಳವರಾಗಿ ಬಂದ ಪ್ರಾಣಸಂಗಟಗಳನ್ನುಕೂಡ ಅನುಭವಿಸುವಷ್ಟು ತಯಾರಿಯುಳ್ಳವರಾದರು. ಯಾವತ್ತರೂ ಆ ಕಾಯದೆಭಂಗದ (F) ನಿಯಮಗಳನ್ನುಮನಮುಟ್ಟಿ ಪಾಲಿಸುವಷ್ಟು ದೃಢನಿಶ್ಚಯಿಗಳಾದರು. ಕರಕೊಡುವದೂ ಬಂದಾಯಿತು. ಈ ಯಾವತ್ತೂ ಕಾರ್ಯಗಳಲ್ಲಿ ಮಹಾತ್ಮರು ಪ್ರಮುಖರಾಗಿದ್ದರೆಂದು ಬೇರೆಹೇಳಲು ಕಾರಣವಿಲ್ಲ. ಅವರು ಜನರಿಗೆ ತೋಪಿನಬಾಯಿಗೆ ಬೀಳುವ ಹೊತ್ತುಬಂದರೆ ಮೊದಲು ನಾನು ನಂತರ ನೀವೆಂದು ಹೇಳುತ್ತಿದ್ದರು. ಇಂಥ ಅಪೂರ್ವವಾದ ಸಿದ್ಧತೆಯನ್ನು ನೋಡಿ

ಯ ಗೋಳಿಬಾರ, ಮತ್ತು ಅದರಲ್ಲಿ ಒಂದು ಶವದ ಸಂಬಂಧ ದಿಂದ ಕೆಲವರ ನಿರ್ಲಜ್ಜತನದ ದುರ್ವರ್ತನ. ( ೨ ) ಸಿವ್ಹಿಲ್ ಗಾರ್ಡದ ಪಶುತುಲ್ಯ ವರ್ತನ. [ ೩ ] ಬಲಜೋರಿನಿಂದ ಡಾಕಾದಲ್ಲಿ ನಿರುಪದ್ರವಿ ಜನರ ತಂಡಗಳನ್ನು ಹಿಡಿದುಗೋಳಾಡಿಸಿದ್ದು. [ ೪ ] ಅಲೀಗಡದಲ್ಲಿ ಸ್ವಯಂ ಸೇವಕರ ಸಂಗಡಲೂ, ಜನರ ಸಂಗಡಲೂ ಇಟ್ಟ ಮೇಲಿನ ಪ್ರಕಾರದ ವರ್ತನವು. [ ೫ ] ಲಾಹೋರದಲ್ಲಿ ಸ್ವಯಂ ಸೇವಕರ ಸಂಗಡಲೂ, ಜನರ ಸಂಗಡಲೂ ಇದ್ದ ಪಶುತುಲ್ಯ ವರ್ತನದ ಬಗ್ಗೆ **ಡಾ. ಗೋಕುಲಚಂದ** ನಿರಂಗ ಇವರ ಕವಿಾಟಿಯಿಂದ ಆದ ಚೌಕಸಿಯಲ್ಲಿ ಹೊರ ಬಿದ್ದ ಸಂಗತಿಯು [ ೬ ] ಜಾಲಂದರದಲ್ಲಿಯು ಸ್ವಯಂ ಸೇವಕರ ಸಂಗಡ ಮತ್ತು ಜನರ ಸಂಗಡ ದುಷ್ಟತನದಿಂದಲೂ, ನಿರ್ದಯು ತನದಿಂದಲೂ ನಡೆದದ್ದು ( ೭ ) ಡೇರಾಡವಾನದಲ್ಲಿ ಒಬ್ಬ ಹುಡುಗನನ್ನು ಗೋಳೀಬಾರಿನಿಂದ ಕೊಂದದ್ದು. ಮತ್ತು ನಿರ್ದಯು ತನದಿಂದ ಸಭೆಯನ್ನು ಮುರಿದದ್ದು. [ ೮ ] ಬಹಾರ ಪ್ರಾಂತದಲ್ಲಿ ತೋಟಿಗರ ಪ್ರೇರಣೆಯಿಂದ ಹಳ್ಳಿಗಳನ್ನು ಸುಲಿದದ್ದು. [ ೯ ] ಕಾಂಗ್ರೆಸ ಖಿಲಾಪತಕ ಚೇರಿಗಳ ಮಧ್ಯ ರಾತ್ರಿಯಲ್ಲಿ ನಡೆದ ಝಡತಿ, ಮತ್ತು ಅಲ್ಲಿ ಜನರನ್ನು ಹಿಡಿದ ಸ್ಥಿತಿ ಈ ಯಾವತ್ತೂ ಆರೋಪಗಳು ಸತ್ಯವಾದವುಗಳಿದ್ದು ಇವುಗಳ ಸಂಬಂಧದಿಂದ ಪೂರ್ಣ ಮಾಪು ಲಾಟ ಸಾಹೇಬರ ಪದರಿನಲ್ಲಿ ಹಾಕಲುನಾನು ಸಿದ್ಧನಿದ್ದೇನೆಂದು ಮಹಾತ್ಮರು ಸ್ಪಷ್ಟವಾಗಿ ತಮ್ಮ ಉತ್ತರದಲ್ಲಿ ನಮೂದಿಸಿದ್ದಾರೆ- ನೌಕರ ಶಾಹಿಯು ಇವುಗಳ ಚೌ

ಕಸಿಯ ಅಪೇಕ್ಷೆಯನ್ನು ನಿರಾಕರಿಸಿದರೆ **ಪಂ| ಮಾಲವಿಯ** ವರು ತಮ್ಮ ಮುಂಬೈ ಕವಿಾಟಿಯಲ್ಲಿ ಚೌಕಸಿ ಮಾಡಬಹು ದೆಂಮೂ ಬರೆದಿರುವರು. ಚೌಕಸಿಯಲ್ಲಿ ಮೇಲಿನ ಆರೋಪ ಗಳು ಅಸತ್ಯವೆಂದು ನಿರ್ಣಿತವಾದರೆ ಅದಕ್ಕೆ ಯೋಗ್ಯಪ್ರಾಯ ಶ್ಚಿತ್ತವನ್ನು ತಕ್ಕೊಳ್ಳಲು ನಾನು ಸಿದ್ಧನಿದ್ದೇನೆ. ಈ ಆರೋ ಪಗಳು ಸತ್ಯ ವಿದ್ದರೆ ನನ್ನ ಚಳವಳಿಯು ಸ್ಥಿರವಾಗಿ ವ್ಯವಸ್ಥೆ ಯಿಂದ ನಡೆಯುವದು. ಇಲ್ಲದಿದ್ದರೆ ಒಮ್ಮೆಲೆ ಮುಗ್ಗಿಬೀಳು ವದು. ಈ ಮೇರೆಗೆ **ಲಾಟ** ಸಾಹೇಬರಿಗೆ ಕಡೆಯಸತ್ಯಯು ಕ್ತ ನಿರುತ್ತರ ಸಂದೇಶವನ್ನು ಕಳಿಸಿದನಂತರ ತಮ್ಮ ಮುಂದಿ ನ ಕಾರ್ಯಕ್ಕಾಗಿ ಮಹಾತ್ಮರು ಬಾರಡೊಲಿಗೆ ಬಂದರು. ಅಲ್ಲಿ ಯಾವತ್ತೂ ಸಿದ್ಧತೆಯು ಅವರಅನುಯಾಯಿಗಳಿಂದ ಪೂರ್ಣ ವಾಗಿತ್ತು ಇನ್ನು ಅವರು ಸವಿನಯ ಕಾಯದೆ ಭಂಗ, ಕರಕೊ ಡದೆ ಇರುವದು. ಇವುಗಳನ್ನು ಪ್ರಾರಂಭಿಸುವವರು, ಇಷ್ಟರ ಲ್ಲಿ “ ಚಾಲಿಚುರಾ, ದಲ್ಲಿ ಜನರಿಂದ ಉಪಸ್ಥಿತವಾದ ದಂಗೆ ಯು ” ಅವರಿಗೆ ತಿಳಿಯಿತು ಆಗ ಅವರ ಮನಸ್ಸಿನ ಸ್ಥಿತಿಯು ಒಮ್ಮೆಲೆ ಬದಲಾಯಿತು. ಅತಿಶಯ ಉತ್ಸಾಹದಿಂದಲೂ, ದೃ ಢ ನಿಶ್ಚಯದಿಂದಲೂ, ಕೂಡಿದ ಅವರು ತಮ್ಮ ಶಾಂತಿಮಯ ಮನಸ್ಸಿನಲ್ಲಿ ಸರ್ವ ಭಾರತವು ಶಾಂತಿ ಮಯವಾಗದಹೊರ ತು ಸವಿನಯ ಕಾಯದೆ ಭಂಗವನ್ನು ಮಾಡುವದಕ್ಕೆ ಅಯೋ ಗ್ಯವೆಂದು ನಿರ್ಣಯಿಸಿ ಅದರಂತೆ ಬಾರಡೋಲಿಯಲ್ಲಿ ನಡೆಯ ತಕ್ಕ ಆ ವೃತವನ್ನು ಅಲ್ಲಿಗೆ ಬಂದು ಇಟ್ಟು ಬಿಟ್ಟರು. ಇದಕ್ಕೆ **ಪಂ|| ಮಾಲವೀಯ**ವರು ತಮ್ಮ ಸಮ್ಮತಿಯನ್ನು ಕೊಟ್ಟರು.

ಇದರಿಂದ ಜನರಲ್ಲಿ ಒಂದು ಪ್ರಕಾರದ ನಿರುತ್ಸಾಹವು ಉತ್ಪನ್ನ ವಾಗಿ ಇಲ್ಲಸಲ್ಲದ್ದೊಂದು ಅಪವಾದಗಳು ಮಹಾತ್ಮರ ಮೇಲೆ ಬರ ಹತ್ತಿದವು. ಅವೆಲ್ಲವುಗಳನ್ನು ಸಹಿಸಿಕೊಂಡು ಬಂದ ಅಪವಾದಗಳನ್ನು ಯೋಗ್ಯ ಉಪದೇಶದಿಂದ ಖಂಡಿಸಿ, ತಮ್ಮ ಕೃತಿಯೇ ಯೋಗ್ಯವೆಂದು ಜನರಿಗೆ ಸಮ್ಮತಿಸಿ ಕೊಟ್ಟರು. ಮುಂದೆ ಬಾರಡೋಲಿ, ದಿಲ್ಲಿಗಳಲ್ಲಿ ಕೂಡಿದ ವರ್ಕಿಂಗ ಕಮಿಟಿಯಲ್ಲಿಯೂ ಮಹಾತ್ಮರು ಹೀಗೆ ಮಾಡಿದ್ದೇ ಸರಿ ಯಾದದ್ದೆಂದು ಸರ್ವ ಜನರ ಒಪ್ಪಿಗೆ ಯಾಯಿತು. ನಂತರ ಮಹಾತ್ಮರು ಸಾರ್ವತ್ರಿಕ ಕಾಯದೆ ಭಂಗವನ್ನು ಮಾಡ ಕೂಡದೆಂದೂ ವ್ಯಕ್ತಿವಿಷಯಕ ಕಾಯದೆ ಭಂಗವನ್ನು ಅವುಗಳ ನಿಯಮಗಳಲ್ಲಿ ಪ್ರಣೀತರಾದವರು ಮಾಡಲಿಕ್ಕೆ ತಮ್ಮ ಒಪ್ಪಿಗೆ ಇರುವದೆಂದೂ, ಇದರಂತೆ ಸರ್ವ ಪ್ರಾಂತದವರು ನಡಕೊಳ್ಳಬೇಕೆಂದೂ ತಮ್ಮ "ಯಂಗ ಇಂಡಿಯಾ" ಪತ್ರದಲ್ಲಿ ಯೋಗ್ಯ ಮಾತುಗಳಿಂದ ಪ್ರಕಟಿಸಿದರು. ಅದರಂತೆ ಹಿಂದುಸ್ಥಾನದೊಳಗಿನ ಪ್ರತಿಯೊಂದು ಪ್ರಾಂತವು ನಡೆಯಲಿಕ್ಕೆ ಸಿದ್ಧವಾಯಿತು

ಈ ಪ್ರಕಾರ ಮೇಲಿನ ಸಂಗತಿಗಳು ನಡೆದಿರಲು ಮಹಾತ್ಮರನ್ನು ಹಿಡಿಯುವರು; ಎಂಬ ದಟ್ಟ ವರ್ತಮಾನವುಹಿಂದುಸ್ಥಾನದಲ್ಲಿ ಎಲ್ಲೆಲ್ಲಿಯೂ ಪಸರಿಸಿತು. ಇದು ಮಹಾತ್ಮರಿಗೂ ಕೂಡ ತಿಳಿಯಿತು. ಕೂಡಲೆ ಅವರು ತಮ್ಮ ಯಾವತ್ತೂ ಜಬಾಬದಾರಿಯ ಕೆಲಸಗಳನ್ನು ಯೋಗ್ಯ ಅನುಯಾಯಿಗಳನ್ನು ಕರೆಯಿಸಿ ಯೋಗ್ಯ ರೀತಿಯಿಂದ ನಡೆಯಿಸುವಂತೆ ನಿಯಮಿಸಿ ಕೊಟ್ಟರು. ತಮ್ಮ ನಂತರ ಹಿಂದುಸ್ಥಾನದಲ್ಲಿ ಪ್ರತಿಯೊಂದು

ವ್ಯಕ್ತಿಯು ಹೇಗೆ ನಡೆಯ ಬೇಕೆಂಬದನ್ನು ಹೇಳಿದರು. ಮತ್ತು ಸಾಬರ ಮತಿಗೆ ಹೋಗಿ ತಮ್ಮಿಂದಲೇ ಸ್ಥಾಪಿಸಿದ ಸತ್ಯಾಗ್ರಹ ಆಶ್ರಮವು ವ್ಯವಸ್ಥಿತ ರೀತಿಯಿಂದ ನಡೆಯುವಂತೆ ಅಲ್ಲಿ ಯೋಗ್ಯ ಅಧಿಕಾರಿಗಳನ್ನು ನಿಯಮಿಸಿ, ಅವರಿಗೂ, ವಿದ್ಯಾರ್ಥಿಗಳಿಗೂ ಯೋಗ್ಯ ಉಪದೇಶವನ್ನು ಮಾಡಿದರು. ಈ ರೀತಿಯಿಂದ ಮಹಾತ್ಮರು ತಮ್ಮನ್ನವಲಂಬಿಸಿದ ಸರ್ವ ಕಾರ್ಯಗಳಿಂದ ನಿವೃತ್ತರಾಗಿ ವಾರಂಟಿನ ಹಾದಿಯನ್ನೇ ನೋಡುತ್ತ ಕುಳಿತರು. ಈ ಮೊದಲೇ ಮುಂಬೈ ಸರಕಾರವು ಹಿಂದುಸ್ಥಾನ ಸರಕಾರದಿಂದ ಒಪ್ಪಿಗೆಯನ್ನು ಪಡೆದು ತೆಗೆದ ಅವರ ಮೇಲಿನ ವಾರಂಟು ಜಾರಿಯಾಯಿತು. ಮಹಾತ್ಮರು ಬಂಧಿಸಲ್ಪಟ್ಟರು; ಖಟ್ಲೆಯು ನಡೆಯಿತು. ಮ್ಯಾಜಿಸ್ಟ್ರೇಟರು ಸರಕಾರತರ್ಫೆಯ ಯಾವತ್ತೂ ಪುರಾವೆಗಳನ್ನು ತೆಗೆದುಕೊಂಡು ವಿಚಾರಿಸಿ ಖಟ್ಲೆಯನ್ನು ಶಸನ್ಸಕಮಿಟಿಯ ಕಡಿಗೆ ಒಪ್ಪಿಸಿದರು. ಇದು ಅಹಮ್ಮದಾಬಾದದಲ್ಲಿ ನಡೆಯಿತು.

## ಮಹಾತ್ಮರ ಖಟ್ಲೆಯ ವಿಚಾರಣೆ.

### ತಾರೀಖು ೧೮-೩-೧೯೨೨ ಇಸವಿ.

ಅಹಮ್ಮದಾಬಾದ- ತಾರೀಖು ೧೮ನೇ ಮಾರ್ಚ ಸನ್ನ ೧೯೨೨ ಇಸವಿಯದಿವಸ ಮಧ್ಯಾನ್ಹ ೧೨ ಘಂಟೆಗೆ ಸರಿಯಾಗಿ ಶೆಸನ್ ಕೋರ್ಟಿನಮುಂದೆ ಮಹಾತ್ಮರ ಖಟ್ಲೆಯ ವಿಚಾರಣೆಯು ನಡೆಯಿತು. ಖಟ್ಲೆಯು ಪ್ರಾರಂಭವಾಗುವದಕ್ಕಿಂತ ಮೊದಲು ಖಾದಿಯ ವಸ್ತ್ರವಿಭೂಷಿತರಾದ ದೇಶಭಕ್ತರಿಂದಲೂ

ಅನೇಕ ಸದ್ಗೃಹಸ್ಥರಿಂದಲೂ, ಅನೇಕ ಸ್ತ್ರೀಯರಿಂದಲೂ ಕೋರ್ಟು ತುಂಬಿತುಳಕುತ್ತಿತ್ತು. ೧೧ ಹೊಡೆದು ೪೦ ಮಿನಿಟಿಗೆ ಮಹಾತ್ಮಾಜಿಯವರು ಕೋರ್ಟಿನಲ್ಲಿ ಬರುತ್ತಲೆ ಯಾವತ್ತರೂ ಮನಸ್ಸಿನಲ್ಲಿಯೇ ಅವರ ಜಯಜಯಕಾರದೊಡನೆ ಎದ್ದುನಿಂತು ಅವರು ಕೊರ್ಟಿನೊಳಗೆ ಹೋಗಿ ತಮ್ಮ ಸ್ಥಾನದಲ್ಲಿ ಕೂಡ್ರುವವರಿಗೆ ಯಾರೂ ಕೂತಿರಲಿಲ್ಲ. ಮಹಾತ್ಮಾ ಗಾಂಧಿಯವರು ಕೂತನಂತರ ಅವರ ಬಲಗಡೆಗೆ ಮಿ. ಬ್ಯಾಂಕರ ಅವರ ಬಲಗಡೆಗೆ ಪಂ| ಮಾಲವೀಯವರು ಕೂತಿದ್ದರು. ಎಡಗಡೆಗೆ ಅವರ ಪತ್ನಿಯರೂ ಅವರ ಎಡಗಡೆಗೆ ಶ್ರೀಮತಿ ಸರೋಜನಿನಾಯಡು ಸರಲಾದೇವಿ ಮೊದಲಾದವರು ಕೂತಿದ್ದರು. ಹೀಗಿರಲು ೧೨ ಘಂಟೆಗೆ ಸರಿಯಾಗಿ ಡಿಸ್ಟ್ರಿಕ್ಟ ಮತ್ತು ಶೆಸನ್ಸ ಜಜ್ಜರಾದ ಮಿ. ಸಿ. ಭ್ರೂಮಫಿಲ್ಡರೂ ಜ್ಯೂರಿಜನರೂ ಬಂದುಸ್ಥಾನಾಪನ್ನರಾದರು. ಕೂಡಲೇ ಖಟ್ಲೆ ಚೌಕಸಿಗೆ ಪ್ರಾರಂಭವಾಯಿತು. ಸರಕಾರ ತರ್ಫೆಯ ಬ್ಯಾರಿಸ್ಟರರೂ, ವಕೀಲರೂ ತಮ್ಮ ಪುರಾವೆಗಳನ್ನು ಕೋರ್ಟಿನಮುಂದಿಟ್ಟು ಅವುಗಳ ಸಮರ್ಥನವನ್ನು ಮಾಡಿದರು. ನಂತರ ಜಜ್ಜರು ಮಹಾತ್ಮರಿಗೆ ಅವರ ಅಭಿಪ್ರಾಯವನ್ನು ಕೇಳಿದರು. ಅದಕ್ಕೆ ಮಹಾತ್ಮರು ನಾನು ಅಪರಾಧಿ ಇರುತ್ತೇನೆಂದು ಹೇಳಿ ಒಂದು ಲೇಖಿಜಬಾನಿಯನ್ನು ಕೋರ್ಟಿಗೆ ಸಾದರಿಸಿ ಸ್ವಸ್ಥವಾಗಿಕುಳಿತು ವೃತ್ತಪತ್ರವನ್ನೋದಹತ್ತಿದರು. ಆಕಾಲದ ಅವರ ಮುಖಮುದ್ರೆಯನ್ನೂ ಆನಂದ ವೃತ್ತಿಯನ್ನೂ ನೋಡಿದವರಿಗೆ ಮಾತ್ರ ಅವರ ಯೋಗ್ಯತೆಯು ಪ್ರತ್ಯಯಕ್ಕೆ ಬಂದಿರುವದಲ್ಲದೆ

ಅದರ ವರ್ಣನೆಯನ್ನು ಮಾಡಲು ನಮ್ಮ ಲೇಖಣಿಯು ಅಸಮರ್ಥವು. ಇರಲಿ ಮಹಾತ್ಮರ ಲೇಖಿ ಜಬಾನಿಯ ಸಾರಾಂಶವು ಕೆಳಗೆ ಬರೆದಂತೆ—

ಆಫ್ರಿಕೆಯಲ್ಲಿ ತಮ್ಮ ಚರಿತ್ರೆಯಿಂದ ಪ್ರಾರಂಭಿಸಿ ಮಹಾಯುದ್ಧದ ಸಮಾಪ್ತಿಯವರೆಗೆ ತಾವು ಮಾಡಿದ ಸರಕಾರದವರಕೂಡ ಸಹಕಾರಿತೆಯು ಯಾವತ್ತೂ ಇತಿಹಾಸ ವರ್ಣಿಸಿರುತ್ತಾರೆ. ಆಮೇಲೆ ಹಿಂದುಸ್ಥಾನದಲ್ಲಿ ಬಂದನಂತರ ಜನರ ಸ್ವಾತಂತ್ರ್ಯವನ್ನು ಹರಣಮಾಡತಕ್ಕಂಥ ರೌಲೆಟ ಅಕ್ಟಿನ ವಿರುದ್ಧ ಚಳವಳಿಯನ್ನು ನಡೆಸಿದಂದಿನಿಂದ ಪಂಜಾಬದಲ್ಲಿಯ ಅತ್ಯಾಚಾರ ಖಿಲಾಫತಿಯಲ್ಲಿ ಅನ್ಯಾಯ ಜನರ ಸ್ವರಾಜ್ಯದ ಆಕಾಂಕ್ಷೆ ಇವುಗಳ ಮೂಲಕ ತಾವು ಹೇಗೆ ಅಸಹಕಾರಿಗಳಾದರೆಂಬದನ್ನು ವರ್ಣಿಸಿರುತ್ತಾರೆ ಸರ್ವದೇಶ ಹಿತಕರ್ತ ಸುಧಾರಿಗಳಿಗೆ ಸರಕಾರ ಉಪಗಾರ ಮಾಡಿದ ಗಳಲನೇ ಅ. ಕಲಮನ್ನೇ ತಮಗೂ ಹೆಚ್ಚಿದ್ದಕ್ಕಾಗಿ ಸರಕಾರದವರ ಆಭಾರಮನ್ನಿಸಿ ಸದ್ಯದ ರಾಜ್ಯ ಪದ್ಧತಿಯ ಯಾವತ್ತೂ ದೋಷಗಳನ್ನು ಕೋರ್ಟಿನಮುಂದೆ ಇಟ್ಟರು. ಯಾವ ಅಧಿಕಾರಿಯ ವೈಯ್ಯಕ್ತಿಕದ್ವೇಷವನ್ನು ನಾನು ಮಾಡುವದಿಲ್ಲವೆಂದಮೇಲೆ ಬಾದಶಹರ ವಿಷಯದಲ್ಲಿ ಅಪ್ರೀತಿಯು ನನ್ನಲ್ಲಿರಲು ಹೇಗೆ ಶಕ್ಯವಾದೀತು. ಯಾವರಾಜ್ಯ ಪದ್ಧತಿಯಿಂದ ಹಿಂದಿನ ಯಾವರಾಜ್ಯ ಪದ್ಧತಿಗಿಂತಲೂ ಹಿಂದುಸ್ತಾನದ ಅಕಲ್ಯಾಣವು ಹೆಚ್ಚಾಗಿ ಆಗುವದೋ ಆ ರಾಜ್ಯಪದ್ಧತಿಯ ವಿಷಯದಲ್ಲಿ ಅಪ್ರೀತಿಯುಕ್ತವಾಗುವದು. ಒಂದು ಸದ್ಗುಣವೆಂದು ತಿಳಿಯುತ್ತೇವೆ.

ಹೀಗೆ ನನ್ನವಿಶ್ವಾಸದಮೂಲಕ ಆಂಗ್ಲ ರಾಜ್ಯಪದ್ಧತಿಯಮೇಲೆ
ಪ್ರೇಮವೆನ್ನು ತೋರಿಸುವದು, ಪಾಪವೆಂದು ತಿಳಿಯುತ್ತೇನೆ.
ಇಲ್ಲಿ ನನ್ನ ವಿರುದ್ಧವಾದ ಪುರಾವೆಗಳಿಂದು ಸಾದರಿಸಿದ ಲೇಖ
ಗಳನ್ನು ಬರೆಯುವದು ಅತ್ಯಂತ ಮರ್ಯಾದೆಯ ಕಾರ್ಯ
ವೆಂದು ಅನಿಸುತ್ತದೆ. ಸತ್ಯವನ್ನು ಹೇಳುವವಾದರೆ ಹಿಂ
ದುಸ್ಥಾನ ಇಂಗಲಂಡ ಈ ಎರಡು ದೇಶಗಳು ಅಸ್ವಾಭಾವಿಕ
ಬಂಧನದಲ್ಲಿ ಕಾಲವನ್ನು ತೆಗೆಯುತ್ತಿದ್ದು ಆ ಬಂಧನದಿಂದ
ಮುಕ್ತವಾಗಲು ಅಸಹಕಾರವು ಒಂದೇ ಮಾರ್ಗವೆಂಬದನ್ನು
ತೋರಿಸಿಕೊಟ್ಟು ದುಷ್ಟಸಂಗತಿಗಳ ಕೂಡ ಅಸಹಕಾರತೆಯ
ನ್ನು ಮಾಡುವದರಿಂದ ಯಾವಶಿಕ್ಷೆಯು ವಿಧಿಸಲ್ಪಡುವದೋ
ಅಂಥ ಶಿಕ್ಷೆಯನ್ನು ಅನುಭವಿಸಲು ಸಿದ್ಧರಾಗತಕ್ಕದ್ದಂವರೆ ಅನ್ನ
ತ್ಯಾಚ್ಯಾರಿಗಳಾಗುವವೆಂದು ತೋರಿಸಿರುವೆನು. ಮತ್ತು
ಯಾವ ಕೆಲಸಗಳ ಮೂಲಕ ಸದ್ಯದ ಕಾಯದೆಯಿಂದ ಅಪ
ರಾಧವೆಂದು ತಿಳಿದು ಶಿಕ್ಷೆಯು ವಿಧಿಸಲ್ಪಡುವದೋ ಯಾವ
ಕೆಲಸಗಳು ನಾಗರೀಕರ ಉಜ್ವಲವಾದ ಕರ್ತವ್ಯವೆಂದು ತಿಳಿ
ಯಲ್ಪಟುವದೋ ಅಂಥ ಕರ್ತವ್ಯಗಳ ಸಂಬಂಧವಾಗಿ ಎಷ್ಟು
ಕಠಿಣತರವಾದ ಶಿಕ್ಷೆಯನ್ನು ವಿಧಿಸಿದರೂ ಅದನ್ನು ಅನುಭವಿ
ಸಲು ಅತ್ಯಾನಂದಿಯಾಗಿ ನಾನು ಸಿದ್ಧನಿದ್ದೇನೆ. ಆದ್ದರಿಂದ
ನ್ಯಾಯಮೂರ್ತಿಗಳೇ ಮತ್ತು ಅಸೇಸರ ಬಂಧುಗಳೇ ನಾನು
ನಿಶ್ಚಯವಾಗಿ ನಿರ್ದೋಷಿಯಾಗಿದ್ದು ಯಾವಕಾಯದೆಯ
ಅಮಲು ನಡಿಯಿಸಲು ತಮಗೆ ಒಪ್ಪಿಸಿರುವರೋ ಆ ಕಾಯ
ದೆಯು ದುಷ್ಟವಾಗಿತ್ತೆಂದು ನಿಮ್ಮ ವಿಶ್ವಾಸನೀಯ ಅಭಿಪ್ರಾಯ

ವಿಸ್ವರೆ ನಿವು ನಿಮ್ಮ ಜಾಗೆಗಳ ರಾಜೀನಾಮೆಗಳನ್ನು ಕೊಟ್ಟು ಆ ದೋಷದಿಂದ ಸ್ವತಃ ನೀವೇ ಮೊದಲು ಮುಕ್ತರಾಗಿರಿ. ಇಲ್ಲವಾದರೆ ಯಾವ ಕಾಯದೆಯು ಅಮಲು ನಡೆಯಿಸಲು ತಮಗೆ ಒಪ್ಪಿಸಿರುವರೋ ಆ ಕಾಯದೆಯು ಉತ್ತಮವಿದ್ದು ಈ ದೇಶದಲ್ಲಿಯೂ ಜನರಿಗೆ ನಿಶ್ಚಯವಾಗಿ ಹಿತಕಾರಿಯಾಗಿರುತ್ತದೆಂದು ಮತ್ತು ನಮ್ಮ ಹೇಳುವಿಕೆಯು ಜನರಿಗೆ ಅಕಲ್ಯಾಣವೆಂದು ತಮ್ಮ ವಿಶ್ವಾಸವಿದ್ದರೆ ನನಗೆ ಅತ್ಯಂತ ಕಠಿಣ ತರದ ಶಿಕ್ಷೆಯನ್ನು ಕೊಡತಕ್ಕದ್ದು ಅದನ್ನು ನಾನು ಸಂತೋಷದಿಂದ ಅನುಭವಿಸಲು ಸಿದ್ಧನಿದ್ದೇನೆ

ನಂತರ ಅವತ್ತಿನ ದಿವಸ ಖಟ್ಲೆಯು ತಹಕೂಬವಾಯಿತು ಮರುದಿವಸ ಪುನಃ ಚೌಕಸಿಯಾಗಿ ಮಹಾತ್ಮರಿಗೆ ಲೋಕಮಾನ್ಯರ ಉಪಮೆಯನ್ನು ಕೊಟ್ಟು ಸಧ್ಯದ ಪರಿಸ್ಥಿತಿಯಲ್ಲಿ ತಾವು ಸಮಾಜದಿಂದ ದೂರಾಗಿರುವದೇ ಹಿತವೆಂದು ನನಗೆ ಅನಿಸುವ ಕಾರಣ ತಮಗೆ ೬ ವರ್ಷ ಸಾದಾಶಿಕ್ಷೆಯನ್ನು ವಿಧಿಸಿರುವೆನೆಂದು ಜೆಜ್ ಸಾಹೇಬರು ಹೇಳಿದರು. ಆ ಕಾಲದಲ್ಲಿಯೂ ಅವರ ಮುಖಮುದ್ರೆಯಲ್ಲಿಯೂ ಆನಂದವೃತ್ತಿಯಲ್ಲಿಯೂ ಸ್ವಲ್ಪವೂ ಹೆಚ್ಚುಕಡಿಮೆಯಾಗಿರಲಿಲ್ಲ ಮಹಾತ್ಮರ ಮಹತ್ತರ ಗುಣಗಳೇ ಅಂತಹವು. ಇರಲಿ ಶಿಕ್ಷೆಯು ವಿಧಿಸಲ್ಪಟ್ಟನಂತರ ಜೇಲಿಗೆ ಒಯ್ಯುವ ಪೂರ್ವದಲ್ಲಿ ಸಿಕ್ಕ ಅರ್ಧತಾಸಿನ ಅವಧಿಯಲ್ಲಿ ಮಹಾತ್ಮರು ಹೇಳತಕ್ಕವರಿಗೆ ಹೇಳುವದನ್ನೆಲ್ಲ ಹೇಳಿ ಎಲ್ಲರ ನಿರೋಪವನ್ನು ಆನಂದದಿಂದ ತಕ್ಕೊಂಡರು. ಕೂಡಲೆ ಪೋ. ಸು. ಸಾಹೇಬರು ಮಹಾತ್ಮಾಜಿಯವರನ್ನು ಮೋಟಾರಿನಲ್ಲಿ ಕೂಡ್ರಿಸಿಕೊಂಡು ಜೇಲಿಗೆ ಕರಕೊಂಡು ಹೋದರು.

# ಪುರವಣಿ

ಆಯಿತು; ಇಲ್ಲಿಗೆ ನಮ್ಮ ಲೇಖಣಿಯು ಅವಸಾನವೂ, ಹೃದಯದ ಒಂದು ಪ್ರಕಾರದ ಉತ್ಸಾಹವೂ ಮುಗಿದಹಾಗಾಯಿತು. ಆದರೂ ಆ ಮಹಾತ್ಮರ ತಪೋಯುಕ್ತಮನೋಹರ ಉಪದೇಶಾಂಬ್ರುತಪಾನಿಗಳಾದ ನಾವು ಅವರ ಗುಣಾನುವಾದವನ್ನು ನಮ್ಮ ಅಲ್ಪಮತಿಗೆ ತಿಳಿದಷ್ಟರಮಟ್ಟಿಗೆ ಹೇಳದೆ ಹಾಗೆಯೇ ಬಿಟ್ಟರೆ ಕೃತಘ್ನತಾದೋಷಕ್ಕೆ ಪಾತ್ರರಾಗುವೆವು. ಆಗಲಿ; ಅವರು ಬಂಧನದಿಂಮುಕ್ತನ್ನರಾದ ಹೃದಯ ಚಾಂಚಲ್ಯದಲ್ಲಿ ಹೇಗಾದರೂ, ಏನಾದರೂ, ಹೇಳಿ ಒಮ್ಮೆ ಮುಗಿಸಿಬಿಡುವದು ಧರ್ಮವೂ ಕರ್ತವ್ಯಕರ್ಮವೂ ಎಂದು ತಿಳಿದು ಮುಂದೆ ಬರೆಯಲು ಉಪಕ್ರಮಿಸುವೆವು.

ಮಹಾತ್ಮರಿಗೆ ಶಿಕ್ಷೆಯು ವಿಧಿಸಲ್ಪಟ್ಟನಂತರ ಮೊದಲು ಅಹಮುದಾಬಾದ ಸೆಂಟ್ರಲ್ ಜೇಲಿಗೆ ಅವರನ್ನು ಕರಕೊಂಡು ಹೋದರು. ಅವರ ಸಂಗಡ ಶಾಲೆಮುದೆಯ ದ್ವಾರದವರಿಗೆ ಸಹಸ್ರಾರು ಜನರು ಹಿಂಡುಗಟ್ಟಿಕೊಂಡು ಶಾಂತಿಸಾಗರದಂತೆ ನಡೆದಿದ್ದರು ಮಹಾತ್ಮರು ಒಳಗೆ ಪ್ರವೇಶಮಾಡುವದಕ್ಕೆ ಮೊದಲು ತಮ್ಮನ್ನು ಕಳಿಸಬಂದ ಕಂದಿ ಕುಂದಿ ಮಾನಮುಖವುಳ್ಳ ಸಜಲನೇತ್ರಗಳಾದ ಆ ಯಾವತ್ತೂ ದೀನಜನರನ್ನುದ್ದೇಶಿಸಿ- ಮಮ ಪರಮಪ್ರಿಯ ಬಂಧು, ಭಗಿನೀಯರೇ! ಸೇವೆಗಳತ ಅತ್ಯಂತ ಪವಿತ್ರವೂ ಮಹತ್ವವೂ ಆದ ದೇಶಸೇವೆಯು

ನ್ನು ಈವರೆಗೆ ನಾನು ತಮ್ಮಲ್ಲಿದ್ದುಕೊಂಡು ತಮ್ಮಲ್ಲಿರಸಹಾಯದಿಂದ ಕೈಲಾದಮಟ್ಟಿಗೆ ಮಾಡಿದೆನು. ಇನ್ನುಮುಂದೆಮಾತ್ರ ಅದು ನನ್ನ ತಪಶ್ಚರ್ಯದ ಕೊರತೆಯಮೂಲಕ ಲಭಿಸಲು ಶಕ್ಯವಿಲ್ಲ ಈಶ್ವರೀ ಸಂಕೇತಕ್ಕೆ ಉಪಾಯವಿಲ್ಲ ಆದರೆ ತಾವೆಲ್ಲರೂ ಈ ಭರತಭೂಮಿಯ ಉದ್ಧಾರಕ್ಕಾಗಿ ನನ್ನ ಹೇಳಿಕೆಯಂತೆ ಮನಮುಟ್ಟಿ ಪ್ರಯತ್ನಮಾಡುವಿರೆಂದು ನಾನು ತಿಳಿಯುತ್ತೇವೆ. ನನ್ನ ಆತ್ಮಕ್ಕೆ ಸುಖಶಾಂತಿಗಳು ಸಿಗಬೇಕೆಂದು ತಮ್ಮೆಲ್ಲರ ಅಪೇಕ್ಷೆಇದ್ದರೆ ಈ ಯಾವತ್ತೂ ಭರತ ಖಂಡವು ಸ್ವಾವಲಂಬಿಯಾಗಿ ಖಾದಿಮಯವಾಗುವಂತೆ ತಾವು ಪ್ರಯತ್ನಮಾಡಿರಿ. ಹೆಚ್ಚುಹೇಳಲು ಸಮಯವಿಲ್ಲ. ಕಾಂಗ್ರೆಸ್ಸಿನ ನಿಯಮಗಳಂತೆ ಪ್ರತಿಯೊಬ್ಬ ಭರತ ನಿವಾಸಿಯು ನಡೆದು ಹಿಂದು ಮುಸಲ್ಮಾನರಲ್ಲಿಯ ಐಕ್ಯವನ್ನು ದೃಢವಾಗಿ ಅಭಿವೃದ್ಧಿಗೊಳಿಸಿ ಸ್ಪ್ರಶ್ಯಾಸ್ಪೃಶ್ಯತೆಯನ್ನು ತೆಗೆದುಹಾಕಿ ಪಾರತಂತ್ರ್ಯ ಪಂಕದಲ್ಲಿ ಬಿದ್ದು ತೊಳಲಿ ಬಳಲಿ ಬಾಯಾರಿ ಆರ್ತಧ್ವನಿಯಿಂದ ಕೂಗುವ ಭರತಮಾತೆಯನ್ನು ಸ್ವತಂತ್ರಳನ್ನಾಗಿಮಾಡಿ ಸಾರ್ಥಕ ಜನ್ಮಗಳಾಗಿರಿ ಮತ್ತು ನಿಮ್ಮ ಸಂತತಿಗಳ ಋಣದಿಂದ ಮುಕ್ತರಾಗಿರಿ ನಾನುಮಾತ್ರ ಎಲ್ಲಿದ್ದರೂ ಸ್ವರ್ಗಕ್ಕಿಂತಲೂ ಅಧಿಕ ಪ್ರಿಯವಾದ ಜನ್ಮಭೂಮಿಯ ಉದ್ಧಾರಕ್ಕಾಗಿ ಸದಾ ಸರ್ವಕಾಲ ಚಿಂತಿಸುವೆನು. ನಿರಪರಾಧಿಯಾದ ನನ್ನ ಕಾರಾಗ್ರಹವಾಸದ ಆ ಚಿಂತೆಯ ಫಲವು ಪುಕ್ಕಟಿಯಾಗಿ ಹೋಗಲಿಕ್ಕಿಲ್ಲವೆಂದು ನನ್ನ ಆತ್ಮವು ನನಗೆ ಹೇಳುತ್ತದೆ.

ಇಷ್ಟುಹೇಳಿ ಮಹಾತ್ಮರು ಅಲ್ಲಿ ಮತ್ತೊಮ್ಮೆ ಸಂತೋ

ಷದಿಂದ ಎಲ್ಲರ ನಿರೋಪವನ್ನು ತಕ್ಕೊಂಡು ಕಾರಾಗಾರಾಭಿ ಮುಖರಾದರು. ಕೂಡಲೇ ಜನಸ್ತೋಮವು ಅತ್ಯಂತ ದುಃಖದಿಂದ ಹಿಂತಿರುಗಿತು. ೩-೪ ದಿವಸಗಳವರೆಗೆ ಮಹಾತ್ಮರು ಅಲ್ಲಿಯೇ ಇದ್ದನಂತರ ಸಾಬರಮತಿಗೆ ವಯ್ಯಲ್ಪಟ್ಟರು. ಅಲ್ಲಿಂದ ಅವರು ಬರೋಡಾಕ್ಕೆ ಒಯ್ಯಲ್ಪಟ್ಟು ಪುನಃ ಸಾಬರಮತಿಗೆ ತರಲ್ಪಟ್ಟಿರುತ್ತಾರೆ ಸದ್ಯಕ್ಕೆ ಮಹಾತ್ಮರು ಸಾಬರಮತಿಯು ಜೇಲಿನಲ್ಲಿರುತ್ತಾರೆ ಪ್ರಸ್ತುತ ಅವರ ಪ್ರಕೃತಿಯು ನೆಟ್ಟಗಿರುತ್ತದೆ. ಆಯಿತು ಇಲ್ಲಿಗೆ ಮಹಾತ್ಮರ ಚರಿತ್ರೆಯು ಮುಗಿದ ಹಾಗಾಯಿತು. ಅವರ ಉಪದೇಶದಂತೆ ಅವರ ಅನುಯಾಯಿಗಳಾದ ನಮ್ಮೆಲ್ಲರ ಕರ್ತವ್ಯವನ್ನಷ್ಟು ಹೇಳಿ ಈ ಪುಟ್ಟಲೇಖವನ್ನು ಮುಗಿಸುವೆವು,

ನಾವೆಲ್ಲರೂ ಮಹಾತ್ಮರ ಉಪದೇಶದಂತೆ ಒಮ್ಮೆನಿಸ್ಸಿನಾಹನದೆದ್ದು ದುಷ್ಟಟಗಳಿಂದನಿವರಕ್ತರಾಗಿ ಭರತಭೂಮಿಯ ಉದ್ಧಾರಕ್ಕಾಗಿ ಯತ್ನಿಸತಕ್ಕದ್ದು. ಖಾದಿಯಹೊರತು ಅನ್ಯವಸ್ತ್ರಗಳು ಪಾಪಮಯವೆಂದು ತಿಳಿದು ಖಾದಿಯನ್ನೇ ಧರಿಸತಕ್ಕದ್ದು ಶಾಯಣರತ್ವೇನಸ್ಪೃಶ್ಯಾಪ್ರತೆಯನ್ನು ಶಗೆದುಹಾಕಬೇಕು. ಹಿಂದುಮುಸಲ್ಮಾನರಲ್ಲಿಯ ಐಕ್ಯವನ್ನು ದೃಢಪಡಿಸತಕ್ಕದ್ದು. ರಾಷ್ಟ್ರೀಯಸಭೆ ಖಿಲಾಫತಗಳ ಅಜ್ಞೆಯನ್ನು ಹಿಂದು ಮುಸಲ್ಮಾನ ಬಂಧುಗಳು ಮನಮುಟ್ಟಿ ಪಾಲಿಸತಕ್ಕದ್ದು.

ಒಬ್ಬನಮೇಲೆ ಬಂದಿವಾಸಿಗಳಾಗಿ ಮಹಾತ್ಮಾಗಾಂಧಿಯವರ ಆತ್ಮಕ್ಕೆ ಸುಖಶಾಂತಿಗಳು ಸಿಗುವಂತೆ ಅವರ ಉಪದೇಶದಂತೆ ನಾವೆಲ್ಲರೂ ಪ್ರಯತ್ನ ಪೂರ್ವಕ ನಡೆಯತಕ್ಕದು.

ಮತ್ತು ಅವರ ಬಂದಿವಾಸರು ಸುಖಕರವಾಗಿ ಪರಿಣಮಿಸಿ ಪುನಃ ಅಧಿಕ ತಪೋಬಲದಿಂದ ಉತ್ಪನ್ನವಾಗುವ ದೈವಶಕ್ತಿ ಯುತರಾಗಿ ಸ್ವತಂತ್ರಳಾದ ನಮ್ಮ ಪರಮಪೂಜ್ಯ **ಭರತ ಭೂಮಾತೆ** ಅವರು ಲಭಿಸುವಂತೆ ಪ್ರೇರಣೆ ಇರಲೆಂದು ಜಗಜ್ಜನಕನೂ. ಜಗಚ್ಛಾಲಕನೂ, ಜಗನ್ನಿಯಂತನೂ ಆದ ಆ ದಯಾಘನ **ಕಮಲಾಕ್ಷ**ನನ್ನು ನಾವೆಲ್ಲರೂ ಮನಮುಟ್ಟಿ ಭಜಿಸತಕ್ಕದ್ದು.

---

## ಶ್ರೀ ರಾಮಚಂದ್ರಪರಬ್ರಹ್ಮಣೇನಮಃ

# ಶ್ರೀ ಮ. ಗಾಂಧಿ ಸ್ತವನ.



ಧಾಟಿ ॥ ಮೂರ್ತಿಮಂತಭೀತಿಖಭಿ ಎಂಬಂತೆ.

ಶ್ರೀಮಹಾತ್ಮಾಗಾಂಧಿನಮೋ। ನಮೋಭಾರತಾಗ್ರಣೀ।
ಭೂಮನೋಹರಾತ್ಮನಮೋ । ನಮೋಬುಧಕುಲಾಗ್ರಣೀ ॥ ಪಲ್ಲ ॥

ಗಾಂಧಿಮಹಿಮ ನಿನ್ನಪೊಲ್ವ। ಪೂತರುಂಟೆಧರೆಯೊಳು।
ಬಾಂಧವನೀನಾಗಿ ಜಗದಿ। ಮೆರೆವೆಧನ್ಯಜನ್ಯನೈ ॥೧॥

ಧೀರ-ಶೂರ-ಸುಗುಣಸಾರ । ಭೂರಿದಯಾಪರ-ನರ ।
ವೀರವಿಬುಧವಂದ್ಯಮಹಾ। ಪಾರತಂತ್ರ್ಯಭಯಹರಾ॥೨॥

ಮಹಿಮ ಲಾಲ ದಾಸ ಮಾಲ। ನೀಯು ಅಲ್ಲಿಬಂಧುಗಳ್।

**ನೆಹರು** ಪ್ರಮುಖಸೇವ್ಯಪೂತ । **ಭರತರಾಷ್ಟ್ರ ದೇವತಾ** ॥ ೩ ॥

ಹಸನವಾದ **ಖಾದಿ**ಮುಯುವ । ವಸುಧೇತ್ರಲದಿಗ್ಬೈದಿಹ
ಅಸಹಕಾರಿ ಭಯನಿವಾರಿ । ದಿವಿಜಗಾಂಕ್ತೆನೀಂಸರಿ ॥೪॥

ರಾಜವಾನ್ಯರಾಜವಿಭವ । ಪೂತಿಭಾನುತೇಜನೇ ।
ಮೂಜಗಂಗಳತನಿನ್ನ । ಸರಿಯುದಾದ ಕಾಣೆವೈ ॥ ೫ ॥

ಜಯುತು, ಜಯುತು, ಜಯುತು, **ಗಾಂಧಿ** । ನಿನ್ನ ದೇಶಕಾರ್ಯಕೆ ।
ಜಯುತು, ಜಯುತು, ಜಯುತು, ಸಕಲ । ರಾಷ್ಟ್ರಭಕುತ ವೃಂದಕೆ ॥ ೬ ॥

## ಮಂಗಳಾರತಿ.

ಧಾಟಿ—“ ಬೆರಗಾದೆ ಮಾನಸ ” ಎಂಬಂತೆ

ಜಯ ಮಂಗಳಾರತಿ । **ವರಗಾಂಧಿಮುಹಿಮುನಿಗೆ** ॥ ಪಲ್ಲ ॥
**ಮೋಹನ್ನದಾಸಗೆ** । ಮುಹನೀಯ ಶ್ರೇಷ್ಠಗೇ ಪರತರ।
ಶುಭಕರ । ದುಷ್ಟದೂರ । ಶಿಷ್ಟದೋಷ ॥ ೧ ॥ ಜಯ ॥
ಪರತಂತ್ರ ನಾಶಗೇ । ಸ್ವಾತಂತ್ರ್ಯದಾತಗೇ ನಿರುಪಮ ಸುಖಕರ ।
ಅಸಹಕಾರ । ಶಸ್ತ್ರಧಾರಿ ॥ ೨ ॥ ಜಯ ॥
ಜಯ **ಗಾಂಧಿ** ಪೂತಗೆ । ಭಯಹಾರಿ ಖ್ಯಾತಗೇ।ಸದಮಲ
ಹಿತಕರ । ಪಾರತಂತ್ರ್ಯ । ಬೇಗ ಕಳೆಯೈ ॥ ೩ ॥



ಈ ಪುಸ್ತಕವನ್ನು ವೆಂಕಟೇಶ ಪಾಂಡುರಂಗ ಬಟಗುರ್ಕಿ ಇವರ.

**ದಿ ಹುಬಳೀ ಪ್ರಿಂಟಿಂಗ ವರ್ಕ್ಸ**

ಛಾಪಖಾನೆಯಲ್ಲಿ ಮುದ್ರಿಸಿ ಅದನ್ನು

ಕೃಷ್ಣಾಜಿ ಗುರುರಾವ ಸಂಗಮ ಇವರು ಶ್ರೀಸರಸ್ವತೀ ಧರ್ಮಾರ್ಥ

ವಾಚನಾಲಯ ಕಿಲ್ಲೆ ಹುಬ್ಬಳ್ಳಿಯಲ್ಲಿ ಮುದ್ರಿಸಿ ಪ್ರಸಿದ್ಧ ಮಾಡಿದರು.

